To,
Shri, Vinay Burde

From—! Prakash Burde.

ಶರತ್ ಕಾದಂಬರಿ

# ವಾತ್ಸಲ್ಯ



ಅನುವಾದಕರು :
ಪ್ರಕಾಶ ಬುರ್ಡೆ



೧೯೫೮

ಸುಲಭ ಸಾಹಿತ್ಯ ಪ್ರಕಾಶನ, ಕುಮಟಾ

To,

# ಅರ್ಪಣೆ

ಹದಿನಾರು ವರುಷಗಳ ಹಿಂದೆ ಅಗಲಿದ

## ನನ್ನ ತಾಯಿಯ

ಮಸುಕಾದ ನೆನಪಿಗೆ

From:- ಪ್ರಕಾಶ Burde.

# ವಾತ್ಸಲ್ಯ

೧

**ಯಾದವ ಮುಖರ್ಜಿ ಮತ್ತು ಮಾಧವ ಮುಖರ್ಜಿ** ಇವರಿಬ್ಬರೂ ಮಲ-ಸಹೋದರರೆಂಬುದನ್ನು ಸ್ವತಃ ಅವರೂ, ನೆರೆಹೊರೆಯವರೂ ಸಂಪೂರ್ಣ ಮರೆತುಬಿಟ್ಟಿದ್ದರು. ಬಡ ಯಾದವ ಅನೇಕ ಕಷ್ಟಗಳನ್ನು ಸಹಿಸಿ ತಮ್ಮನನ್ನು ವಕೀಲಿ ಪಾಸು ಮಾಡಿಸಿದ್ದನು. ಬಹಳ ಪ್ರಯತ್ನಪಟ್ಟು ಧನಾಢ್ಯ ಜಮೀಂದಾರನ ಏಕಮಾತ್ರ ಪುತ್ರಿ—ಬಿಂದುವಾಸಿನಿಯನ್ನು—ಭ್ರಾತೃವಧುವಿನ ರೂಪದಲ್ಲಿ, ಮನೆ ತುಂಬುವದರಲ್ಲಿ ಕೃತಕೃತ್ಯನಾಗಿದ್ದನು. ಬಿಂದುವಾಸಿನಿ ಅಸಾಧಾರಣ ರೂಪವತಿ. ಮೊಟ್ಟಮೊದಲನೇದಿನ ಅವಳು ಹತ್ತುಸಾವಿರ ರೂಪಾಯಿಯ ಪ್ರಾಮಿಸರಿ ನೋಟನ್ನು ಕೈಯಲ್ಲಿ ಹಿಡಿದು ಗೃಹಪ್ರವೇಶ ಮಾಡಿದಾಗ, ಅವಳ ಅಕ್ಕ—ಯಾದವನ ಹೆಂಡತಿ-ಅನ್ನಪೂರ್ಣೆಯ ಕಂಗಳಲ್ಲಿ ಹನಿ ಮಿಂಚಿತ್ತು. ಮನೆಯಲ್ಲಿ ಯಾರೂ ಹೆಂಗಸರಿಲ್ಲ. ಇದ್ದವರೆಂದರೆ ಇಬ್ಬರು ಸೋದರರು, ಇವಳೊಬ್ಬಳೇ. ಅವಳೇ ಮನೆಯ ಯಜಮಾನಿತಿ. ವಧುವಿನ ಮುಖದ ಮೇಲಿನ ಮುಸುಕನ್ನು ಸರಿಸಿ ಗದ್ದ ಹಿಡಿದು ಮೇಲಕ್ಕೆತ್ತಿ ನೆರೆಹೊರೆಯವರ ಮುಂದೆ ಆಕೆ ಬಿಂದುವಾಸಿನಿಯನ್ನು ಹೊಗಳಿದ ಕಾಲವೊಂದಿತ್ತು.

"ಮನೆಗೆ ತರಬೇಕು ಇಂಥ ವಧುವನ್ನು. ನಿಜಕ್ಕೂ ಲಕ್ಷ್ಮಿಯ ಪ್ರತಿಮೆ ಇದ್ದಂತೆ........" ಎಂದು ಆಗಾಗ ಹೊಗಳುತ್ತಿದ್ದಳು.

ಆದರೆ ಎರಡೇ ದಿನಗಳಲ್ಲಿ ಅವಳಿಗೆ ತನ್ನ ತಪ್ಪಿನ ಅರಿವಾಯಿತು. ವಧು, ರೂಪ-ರೂಪಾಯಿಗಳೊಂದಿಗೆ ನಾಲ್ಮಡಿಯಷ್ಟು ಅಹಂಕಾರ ಮತ್ತು ಅಭಿಮಾನಗಳನ್ನೂ ತಂದಿದ್ದಾಳೆ ಎಂದು ತಿಳಿಯಿತು. ಒಂದು ದಿನ ಏಕಾಂತದಲ್ಲಿ ಪತಿಯನ್ನು ಕರೆದು ಅಂದಳು,

"ನೋಡಿ, ರೂಪ-ರೂಪಾಯಿಗಳನ್ನು ಕಂಡು ಮನೆಗೆ ವಧುವನ್ನು ತಂದಿದ್ದೀರಿ. ಆದರೆ ಇವಳಾದರೂ ಕಾಳಸರ್ಪವೇ."

ಯಾದವನಿಗೆ ಈ ಮಾತಿನ ಮೇಲೆ ವಿಶ್ವಾಸ ಉಂಟಾಗಲಿಲ್ಲ. ತಲೆ ಕೆದರುತ್ತ, "ಅವಳಾದರೂ....ಅವಳು...." ಎಂದು ನಾಲ್ಕೈದು ಬಾರಿ ತಡವರಿಸಿ ಆಫೀಸಿಗೆ ನಡೆದ.

ಯಾದವ ಶಾಂತಪ್ರಕೃತಿಯವ. ಅವನು ಜಮೀಂದಾರರಲ್ಲಿ ಗುಮಾಸ್ತನಾಗಿದ್ದ. ಕೆಲಸ ಮುಗಿದ ಕೂಡಲೇ ಮನೆಗೆ ಬಂದು ಪೂಜೆ-ಪಾಠಗಳಲ್ಲೇ ವೇಳೆ ಕಳೆಯುತ್ತಿದ್ದ. ಮಾಧವ ಅಣ್ಣನಿಗಿಂತ ಹತ್ತುವರುಷ ಚಿಕ್ಕವ. ವಕೀಲನಾಗಿ ಆಗ ತಾನೇ ತನ್ನ ಉದ್ಯೋಗ ಪ್ರಾರಂಭಿಸಿದ್ದ.

ಅವನ ಅಭಿಪ್ರಾಯವೂ ಅತ್ತಿಗೆಯಂತೇ ಆಗಿತ್ತು. "ಅತ್ತಿಗೆ, ರೂಪಾಯಿಯೂ ಅಣ್ಣನಿಗೆ ದೊಡ್ಡದಾಯಿತೇ? ಎರಡು ದಿನ ತಡೆದಿದ್ದರೆ-ನಾನೇ ಗಳಿಸುತ್ತಿದ್ದೆ." ಎನ್ನುತ್ತಿದ್ದ.

ಇದರ ಹೊರತಾಗಿ ಅವರಿಗೆ ಮತ್ತೊಂದು ಆಪತ್ತು ಕಾದಿತ್ತು. ಬಿಂದುವಾಸಿನಿಯನ್ನು ದಂಡಿಸುವದು ಸುಲಭದ ಕೆಲಸವಾಗಿರಲಿಲ್ಲ. ಅವಳಿಗೆ ಬಯ್ದರೆ, ಅವಳ ಭಯಂಕರ ರೋಗ, "ಫೀಟ್ಸ" ಅವರನ್ನೇ ಹೆದರಿಸುತ್ತಿತ್ತು. ಇಂಥ ಸಾದಾ ಮದುವೆಗಳಲ್ಲಿಯೇ ಈ ರೀತಿ ಅನಾಹುತವಾಗುತ್ತದೆ ಎಂಬ ಮಾತು ಎಲ್ಲರಲ್ಲಿಯೂ ಬೇರೂರಿತು. ಆದರೆ ಯಾದವ ಧೃತಿಗೆಡಲಿಲ್ಲ. ಅವನು ಯಾವಾಗಲೂ ಹೇಳುತ್ತಿರುತ್ತಿದ್ದ,

"ನೀವು ಬಳಿಕ ನೋಡುವಿರಂತೆ ಅವಳ ಬುದ್ಧಿ-ಚಾತುರ್ಯ. ಇಷ್ಟೊಂದು ಸುಂದರ ರೂಪ ಉಪಯೋಗವಿಲ್ಲದಿರುತ್ತದೆಯೇ? ನೋಡುವಿರಂತೆ."

ಒಂದು ದಿನ ಮಾತಿಗೆ ಮಾತು ಬೆಳೆದು ಬಿಂದುವಾಸಿನಿ ಒಬ್ಬಳೇ ಮಾತಾಡದೇ ಮೂಲೆಯಲ್ಲಿ ಮುಖ ಬಾಡಿಸಿಕೊಂಡು ಕುಳಿತಳು. ಹೆದರಿಕೆಯಿಂದ ಅನ್ನಪೂರ್ಣೆಗೆ ಏನು ಮಾಡಬೇಕೆಂದು ತೋಚಲಿಲ್ಲ. ಒಮ್ಮೆಲೆ ತನ್ನ ಕೋಣೆಯನ್ನು ಹೊಕ್ಕು ತನ್ನ ಒಂದು ವರ್ಷದ ಮಲಗಿದ ಮಗು ಅಮೂಲ್ಯಚರಣನನ್ನು ಎತ್ತಿ ಬಿಂದುವಾಸಿನಿಯ ಉಡಿಯಲ್ಲಿಟ್ಟು ನಡೆದೇ ಬಿಟ್ಟಳು.

ಅಮೂಲ್ಯ ನಿದ್ದೆಯಿಂದ ಎಚ್ಚತ್ತುದರಿಂದ ಅಳತೊಡಗಿದ.

ಬಿಂದುವಾಸಿನಿ ಆಗ ತಾನೆ ಮೂರ್ಛೆ ಹೊಂದುತ್ತಿದ್ದವಳು, ಮಗು ಆರ್ತಧ್ವನಿ ಕೇಳಿ ಎಚ್ಚತ್ತು, ಮಗುವನ್ನು ಕಂಕುಳಲ್ಲಿರಿಸಿ ತನ್ನ ಕೋಣೆಗೆ ಹೊರಟು ಹೋದಳು.

ತೊಟ್ಟಿಯಲ್ಲಿ ಅಡಗಿದ ಅನ್ನಪೂರ್ಣೆಗೆ ಈ ಮಹಾರೋಗದ ಸಿದ್ಧೌಷಧಿಯನ್ನು ಹುಡುಕಿದುದಕ್ಕಾಗಿ ಬಹಳ ಆನಂದವಾಯಿತು.

ಮನೆಯ ಎಲ್ಲ ಕಾರಭಾರ ಅನ್ನಪೂರ್ಣೆಯೇ ನೋಡಿಕೊಳ್ಳುತ್ತಿದ್ದುದರಿಂದ ಮಗುವಿನ ಆರೈಕೆ ನಡೆಸಲು ಆಕೆಗೆ ಸಾಧ್ಯವಾಗುತ್ತಿರಲಿಲ್ಲ. ಹಗಲಿಡೀ ದುಡಿದು ರಾತ್ರಿ ಮಲಗದಿದ್ದರೆ ಆಕೆಯ ಪ್ರಕೃತಿ ಕೆಡುತ್ತಿತ್ತು. ಹೀಗಾಗಿ ಅಂದಿನಿಂದ ಮನೆಯ ಚಿಕ್ಕ ಸೊಸೆ ಮಗುವಿನ ಭಾರವನ್ನು ತಾನು ವಹಿಸಿಕೊಂಡಳು.

ಸುಮಾರು ಒಂದು ತಿಂಗಳ ನಂತರದ ಘಟನೆ. ಒಂದು ದಿನ ಬೆಳಿಗ್ಗೆ ಬಿಂದುವಾಸಿನಿ ಮಗುವನ್ನು ಎತ್ತಿಕೊಂಡು ಅಡಿಗೆ ಮನೆಗೆ ಬಂದು ಕೇಳಿದಳು,

"ಅಕ್ಕ, ಅಮೂಲ್ಯನ ಹಾಲು ಎಲ್ಲಿದೆ?"

ಅನ್ನಪೂರ್ಣೆ ಕೂಡಲೇ ಹಿಡಿದ ಕೆಲಸ ಅಷ್ಟಕ್ಕೇ ಬಿಟ್ಟು ಹೆದರುತ್ತ ಹೇಳಿದಳು, "ಒಂದೇ ನಿಮಿಷ ತಂಗಿ, ಇದೀಗ ಕೊಡುತ್ತೇನೆ."

ಬಿಂದು ಬಿಸಿ ಮಾಡದೇ ಇದ್ದ ಹಾಲನ್ನು ಕಂಡು ಮೊದಲೇ ಸಿಟ್ಟಿಗೆದ್ದಿದ್ದಳು. ಅವಳು ಕಹಿಯಾಗಿ ನುಡಿದಳು,

"ನಿನ್ನೆಯೂ ಹಾಗೆ, ಇಂದೂ ಹಾಗೆ. ಎಂಟು ಘಂಟೆಯ ಒಳಗೆ ಬೇಕು ಎಂದು ಹೇಳಿದ್ದೆ. ಇಷ್ಟು ಸಣ್ಣ ಕೆಲಸ ಆಗುವದಿಲ್ಲ ಎಂದು ಹೇಳಿದರೆ ನಾನು ಮಾಡುತ್ತಿದ್ದೆನಲ್ಲ. ಈಗ ಒಂಬತ್ತಾಗಿ ಹೋಯಿತು."

ಅಡಿಗೆಯವಳು ಜಗಳ ನೋಡುತ್ತ ಅಲ್ಲಿಯೇ ನಿಂತಿದ್ದಳು. ಬಿಂದುವಾಸಿನಿ ಅವಳತ್ತ ತಿರುಗಿ, "ನಿಮಗೂ ಗೊತ್ತಾಗಲಿಲ್ಲವೇ? ಮನೆಯವರಿಗೆ ಎರಡು ನಿಮಿಷ ಹೊತ್ತು ಮಾಡಿ ಅಡಿಗೆಗಿಟ್ಟರೆ ಏನಾಗುತ್ತಿತ್ತು?"

ಅಡಿಗೆಯವಳು ಮಾತಾಡಲಿಲ್ಲ.

"ಹುಂ. ನಿನ್ನ ಹಾಗೆ ಮಗುವಿಗೆ ಕಾಡಿಗೆ ಹಚ್ಚುವದೊಂದೇ ಕೆಲಸವಲ್ಲ ನನಗೆ, ತಿಳಿಯಿತೇ?" ಅನ್ನಪೂರ್ಣೆ ಗುರುಗುಟ್ಟಿದಳು.

"ಇನ್ನು ಮುಂದೆ ಮಗುವಿನ ಹಾಲು ನೀವು ಮುಟ್ಟಿದರೆ ನನ್ನಾಣೆ—" ಎನ್ನುತ್ತ ಕಂಕಳಲ್ಲಿದ್ದ ಮಗುವನ್ನು ಕೆಳಗೆ ಕೂಡ್ರಿಸಿ ಹಾಲನ್ನು ಒಲೆಯ ಮೇಲೇರಿಸಿದಳು. ಈ ಅನಿರೀಕ್ಷಿತ ಘಟನೆಯಿಂದ ಅಮೂಲ್ಯ ಅಳತೊಡಗಿದ. ಬಿಂದುವಾಸಿನಿ ಅವನ ಕೆನ್ನೆ ಚಿವುಟಿ, ಬೆನ್ನಮೇಲೆ ಹೊಡೆದು, "ಸುಮ್ಮನೆ ಬಿದ್ದಿರು. ಮತ್ತೇ ಸ್ವರ ತೆಗೆದರೆ ಕೊಂದೇ ಬಿಡುವೆ" ಎಂದು ಹೆದರಿಸಿದಳು.

ಮಗು ಅಳುತ್ತಲೇ ಇತ್ತು.

ಬಿಂದುವಾಸಿನಿ ತುಟಿ ಪಿಟಕ್ಕೆನ್ನದೇ ಮಗುವನ್ನೆತ್ತಿ ಹಾಲನ್ನು ಬಿಸಿ ಮಾಡತೊಡಗಿದಳು.

ಅನ್ನಪೂರ್ಣೆ ಇದೆಲ್ಲ ನೋಡುತ್ತ ನಿಂತುಬಿಟ್ಟಳು. ಬಿಂದುವಾಸಿನಿ ಹಾಲನ್ನು ಬಿಸಿಮಾಡಿ ಮಗುವಿಗೆ ಕುಡಿಸಲೆಂದು ಎತ್ತಿಕೊಂಡು ಹೋದಮೇಲೆ ಅಡಿಗೆಯವಳನ್ನು ಕುರಿತು ನುಡಿದಳು,

"ನೋಡಿದಿಯಾ ಇವಳ ಸ್ವರೂಪ! ಆ ದಿನ ಜೇಷ್ಟೆಗೆ ಮಗುವನ್ನು ವಹಿಸಿಕೋ ಅಂದದ್ದೇ ತಪ್ಪಾಯಿತು...." ಎಂದಳು.

ಏನೇ ಇರಲಿ, ಅನ್ನಪೂರ್ಣೆಯ ಮಗ ದೊಡ್ಡವನಾದಂತೆ ತಾಯಿಗೆ ಚಿಕ್ಕಮ್ಮನೆಂದೂ ಚಿಕ್ಕಮ್ಮನಿಗೆ ಅಮ್ಮ ಎಂದೂ ಕರೆಯತೊಡಗಿದ.

೨

೪–೫ ವರುಷಗಳು ಉರುಳಿದವು. ಬಹಳ ವಿಜೃಂಭಣೆಯಿಂದ ಮಗು ಅಮೂಲ್ಯವನ್ನು ಶಾಲೆಗೆ ಕಳಿಸಲಾಯಿತು. ಮರುದಿನ ಬೆಳಿಗ್ಗೆ ಅನ್ನಪೂರ್ಣೆ ಅಡಿಗೆಯ ಕೆಲಸದಲ್ಲಿ ವ್ಯಸ್ತಳಿದ್ದಾಗ ಬಿಂದುವಾಸಿನಿ ಹೊರಗಿನಿಂದ ಕರೆದಳು,

"ಅಕ್ಕಾ, ಅಮೂಲ್ಯ ವಂದಿಸಲು ಬಂದಿದ್ದಾನೆ. ಸ್ವಲ್ಪ ಹೊರಗೆ ಬಂದು ನೋಡಿ."

ಅನ್ನಪೂರ್ಣೆ ಹೊರಗೆ ಬಂದು ಮಗನ ವೈಭವ ಕಂಡು ಬೆರಗಾದಳು. ಕಣ್ಣಿಗೆ ಕಾಡಿಗೆ, ಹಣೆಗೆ ಗಂಧ, ಕುತ್ತಿಗೆಯಲ್ಲಿ ಚಿನ್ನದ ಸರ, ಹಳದೀ ಪಂಜೆ ಉಟ್ಟಿದ್ದಾನೆ. ಕೈಯಲ್ಲೊಂದು ಮಸಿ ಕುಡಿಕೆ, ಕಂಕುಳಲ್ಲಿ ಸುತ್ತಿದ ತಾಡಪತ್ರಿ.

"ಅಮ್ಮನ ಕಾಲು ಮುಟ್ಟಿ ನಮಸ್ಕರಿಸು," ಬಿಂದುವಾಸಿನಿ ಹೇಳಿ ಕೊಟ್ಟಳು.

ಅಮೂಲ್ಯ ತಾಯಿಗೆ ನಮಸ್ಕರಿಸಿದ.

ಅವನ ಕಾಲುಗಳಲ್ಲಿ ಚಪ್ಪಲಿಯಾಗಲಿ, ಬೂಟಾಗಲಿ ಇರಲಿಲ್ಲ. ಪರ ದೇಶದ ತರತರದ ಪೋಷಾಕನ್ನೂ ಅವನು ಮಾಡಿಕೊಂಡಿರಲಿಲ್ಲ. ಬಹಳ ಸಾದಾ ಪೋಷಾಕು. ಅನ್ನಪೂರ್ಣೆ ಅವನ ವೇಷ–ಭೂಷೆ ನೋಡಿ ನಗುತ್ತ, "ಬಿಂದೂ, ಮಗು ಬಹುಶಃ ಓದಲು ಹೋಗುತ್ತಿರುವನೋ ಅಥವಾ...."

"ಅಹುದು ಅಕ್ಕ, ಗಂಗಾಪಂಡಿತರ ಪಾಠಶಾಲೆಗೆ ಕಳಿಸುತ್ತಿರುವೆನು. ಆಶೀರ್ವದಿಸಿ," ಬಿಂದು ನಗುತ್ತಲೇ ಉತ್ತರಿಸಿದಳು.

ಕೂಡಲೇ ಅಮೂಲ್ಯನನ್ನು ಕರಕೊಂಡು ಹೋಗುವ ಆಳಿನ ಕಡೆಗೆ ತಿರುಗಿ ಹೇಳಿದಳು,

"ಉಪಾಧ್ಯಾಯರಿಗೆ ಹೇಳಪ್ಪ ಮಗುವನ್ನು ಯಾರೂ ಹೊಡೆಯದಂತೆ ನೋಡಿಕೊಳ್ಳಬೇಕು.—ನಾನು ಹೇಳಿದ್ದೇನೆ ಎಂದು ಹೇಳು. ಅಕ್ಕ, ಈ ಐದು ರೂಪಾಯಿ ಮಗುವಿನ ಕೈಯಲ್ಲಿರಿಸಿ" ಎಂದು ನುಡಿಯುತ್ತ ಭಾವನಾವೇಶ ದಿಂದ ಮಗುವನ್ನೆತ್ತಿಕೊಂಡು ಹೊರಗೆ ನಡೆದಳು.

ಅಣ್ಣಪೂರ್ಣೆಯ ಕಣ್ಣು ತುಂಬಿ ಬಂದವು. ಆಕೆ ಅಡಿಗೆಯವಳನ್ನು ಕುರಿತು, "ಮಗುವನ್ನು ಆಡಿಸುವದರಲ್ಲೇ ಸದಾ ಮಗ್ನಳಾಗಿರುತ್ತಾಳೆ. ಹೊತ್ತೇ

ಸಿಗುವದಿಲ್ಲ. ತನ್ನ ಹೊಟ್ಟೆಯಲ್ಲೇ ಹುಟ್ಟಿದ್ದರೆ.... ಯಾರಿಗೆ ಗೊತ್ತು ಏನೇನು ಮಾಡುತ್ತಿದ್ದಳೆಂಬುದು" ಅಂದಳು.

"ದೇವರಿಗೆ ಕರುಣೆಯಿಲ್ಲ, ಇಲ್ಲದಿದ್ದರೆ...ಹತ್ತೊಂಬತ್ತು ವರ್ಷ ಕಳೆದು ಹೋಯಿತಲ್ಲವೇ?" ಅಡಿಗೆಯವಳ ಮಾತು ಪೂರ್ತಿಯಾಗುವ ಮೊದಲೇ ಬಿಂದುವಾಸಿನಿ ಮಗುವನ್ನು ಬಿಳ್ಕೊಟ್ಟು ಒಬ್ಬಳೇ ಒಳಗೆ ಬಂದು ಹೇಳಿದಳು,

"ಅಕ್ಕ, ಯಜಮಾನರಿಗೆ ಹೇಳಿ ನಮ್ಮ ಮನೆಯ ಎದುರಿಗೆ ಒಂದು ಶಾಲೆ ತೆರೆಯಬಹುದಿತ್ತಲ್ಲ. ನಾನು ಎಲ್ಲ ಹಣ ಕೊಡುತ್ತಿದ್ದೆ"

ಅನ್ನಪೂರ್ಣೆ ಸೆರಗಿನಿಂದ ಕಣ್ಣೊರಸಿಕೊಂಡು ನಕ್ಕಳು. "ಹುಚ್ಚೀ, ಅವನು ಎರಡು ಹೆಜ್ಜೆ ಸಹ ಹಾಕಿಲ್ಲ, ಇಷ್ಟರಲ್ಲೇ ನಿನ್ನ ವಿಚಾರ ಬದಲಾಯಿತೇ? ಇಲ್ಲ ದಿದ್ದರೆ ನೀನೇ ಹೋಗಲ್ಲ ಅವನ ಜೊತೆ. ಹೋಗಿ ಶಾಲೆಯಲ್ಲೇ ಕುಳಿತುಕೋ"

ಬಿಂದು ನಾಚಿಕೆಯಿಂದ ನಕ್ಕು—

"ಹಾಗೇನೂ ಇಲ್ಲ ಅಕ್ಕ, ಆದರೆ ಕಣ್ಣೆದುರಿಗೆ ಮಗು ಕಲಿಯುತ್ತಿದ್ದರೆ ಎಷ್ಟು ಚಂದ? ಮೇಲಾಗಿ ಅವನ ಜೊತೆಯವರು ಅವನನ್ನು ಕೆಣಕಿ ಹೊಡೆ ದರೆ...."ಎಂದಳು.

"ಹೊಡೆದರೇನು? ಮಕ್ಕಳೆಲ್ಲ ಒಂದೇ ತರಹ ಅಲ್ಲವೇ? ಆದರೂ ಅವ ರವರ ತಂದೆ ತಾಯಿಗಳು ಧೈರ್ಯಮಾಡಿ ಓದಲು ಕಳುಹಿಸುತ್ತಾರಲ್ಲ; ನೀನು ಮಾತ್ರ ಏಕೆ ಹೆದರುತ್ತೀ?"

ಬೇರೆಯವರೊಂದಿಗೆ ತುಲನೆ ಮಾಡುವದು ಬಿಂದುವಾಸಿನಿಗೆ ಸರ್ವಥಾ ಸೇರುತ್ತಿರಲಿಲ್ಲ. ಅವಳು ಇದರಿಂದ ಮನದಲ್ಲಿಯೇ ಅಸಂತುಷ್ಟಳಾಗಿ ಹೇಳಿದಳು,

"ನಿಮ್ಮ ಮಾತು ಯಾವಾಗಲೂ ಹಾಗೆಯೇ. ಯಾರಾದರೂ ಲೇಖನಿ ಯಿಂದ ಕಣ್ಣು ಚುಚ್ಚಿದರೆ...?"

"ಡಾಕ್ಟರರಿದ್ದಾರಲ್ಲ; ತೋರಿಸಿದರಾಯಿತು." ಅವಳ ಮನಸ್ಸಿನ ಭಾವ ತಿಳಿದು ನಗುತ್ತ ಅನ್ನಪೂರ್ಣೆ ಹೇಳಿದಳು. "ಆದರೆ ಇಷ್ಟು ಮಾತ್ರ ನಿಜ. ನಾನು ಹಗಲಿರುಳು ಕುಳಿತು ಅವನ ಬಗ್ಗೆ ವಿಚಾರ ಮಾಡಿದರೂ ನನಗೆ ಈ ಭಾವನೆಯೇ ಬರುತ್ತಿರಲಿಲ್ಲ. ಇಷ್ಟು ಹುಡುಗರು ಓದುತ್ತಿಲ್ಲವೇ? ನಾನಂತೂ ಈ ಕಣ್ಣು ಚುಚ್ಚುವ ಆಟವನ್ನು ಈ ತನಕ ಕೇಳಿಲ್ಲ" ಅಂದಳು ಚೇಷ್ಟೆಯ ಸ್ವರದಲ್ಲಿ.

"ನೀವು ಕೇಳಿಲ್ಲ. ಆದರೆ ಆಗಬಾರದು ಎಂದಿದೆಯೇ? ಆದರೆ ಒಂದು ಮಾತು. ನೀವು ಅವರಿಗೆ ಒಂದು ಸಲ ಹೇಳಿದ್ದರೆ ಆಗುತ್ತಿತ್ತು. ಮುಂದಿನದೆಲ್ಲ ನನಗೆ ಸೇರಿದ್ದು."

"ಆದದ್ದೆಲ್ಲ ಆಗಲಿ. ಆದರೆ ಶಾಲೆಯನ್ನು ಅಲ್ಲಿಂದ ಇಲ್ಲಿ ತರಿಸುವದು, ಇಲ್ಲಿಂದ ಅಲ್ಲಿ ಒಯ್ಯುವದು ಇಂಥ ಮಾತನ್ನು ನಾನು ಅವರಿಗೆ ಹೇಳಲಾರೆ. ನೀನು ಅವರೊಂದಿಗೆ ಮಾತಾಡುತ್ತೀಯಲ್ಲ, ನೀನೇ ಹೇಳು" ಎಂದಳು ಗಂಭೀರಳಾಗಿ.

ಈಗ ಮಾತ್ರ ಬಿಂದುವಿಗೆ ಸಿಟ್ಟು ಬಂದಿತು.

"ಹೇಳದೇ ಇರುತ್ತೇನೆಯೇ? ದಿನವೂ ಕಂದನನ್ನು ಇಷ್ಟು ದೂರ ಕಳಿಸಲಾರೆ. ಇದರಿಂದ ಯಾರಿಗೆ ಕೆಡಕೆನಿಸುವದೋ ಅನಿಸಲಿ, ಅದು ದೊಡ್ಡದಲ್ಲ" ಎಂದು ನುಡಿದು ಕೆಲಸದವಳ ಕಡೆಗೆ ತಿರುಗಿ "ಏನೇ? ನಿನಗೇ ಹೇಳಿದ್ದಲ್ಲವೇ ಅವನನ್ನು ಕರಕೊಂಡು ಬಾ ಎಂದು. ಏನು ಮುಖ-ಮುಖ ನೋಡುತ್ತ ನಿಂತಿದ್ದೀ. ನಡೆ." ಎಂದು ಗದ್ದರಿಸಿದಳು.

ಅವಳ ಕೊಪಭಾವ ಕಂಡು ಅನ್ನಪೂರ್ಣೆ ವಿಮನಸ್ಕಳಾದಳು.

"ಒಮ್ಮೆಲೇ ಅಷ್ಟು ದುಡುಕಬೇಡಮ್ಮಾ. ನಿನ್ನ ಕಂದ ಯಾವಾಗಲೂ ಚಿಕ್ಕವನಾಗಿಯೇ ಇರುತ್ತಾನೆಯೇ? ಬೆಳೆದ ಬಳಿಕ ಏನು ಮಾಡುತ್ತೀ? ಈ ಮಾತನ್ನು ಯಾಕೆ ಯೋಚಿಸುವದಿಲ್ಲ?"

ಬಿಂದು ಅವಳ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೇ, ಕೆಲಸದವಳನ್ನು ಕುರಿತು, "ಸೀದಾ ಉಪಾಧ್ಯಾಯರ ಮನೆಗೆ ಹೋಗಿ, ಮಗುವನ್ನು ಕರಕೊಂಡು ಬಾ. ಉಪಾಧ್ಯಾಯರಿಗೆ ಸಂಜೆ ಇಲ್ಲಿ ಬಂದು ಹೋಗಲು ತಿಳಿಸು. ಹುಂ; ನಡೆ....ನನ್ನ ಮಾತು ಅರ್ಥವಾಗದವರ ಬಳಿ ಮಾತಾಡುವದು ನಿರರ್ಥಕ ನಾನು ಏನು ಮಾಡುತ್ತೇನೆ, ಮಾಡಬೇಕು ಎಂಬುದಕ್ಕೆ ನನಗೇನು ಸಲಹೆ ಬೇಕಿಲ್ಲ." ಎಂದು ಅನ್ನಪೂರ್ಣೆಯೆಡೆಗೆ ತೀಕ್ಷ್ಣವಾಗಿ ನೋಡಿ ಪ್ರತ್ಯುತ್ತರಕ್ಕೆ ದಾರಿ ಕಾಯದೇ ತನ್ನ ಕೋಣೆಗೆ ನಡೆದಳು.

ಅನ್ನಪೂರ್ಣೆ ದಿಗಿಲಾಗಿ ಶಿಲಾಪ್ರತಿಮೆಯಂತೆ ನಿಂತುಬಿಟ್ಟಳು.

ಅವಳನ್ನು ನೋಡಿ ಕೆಲಸದವಳು ಅಂದಳು, "ಅಮ್ಮಾ, ಹೀಗೆಕೆ ನಿಂತು ಬಿಟ್ಟಿರಿ? ಅವರು ತಿರುಗಿ ಬಂದರೆ ಸರಿಯಾದೀತು. ಮನಸ್ಸಿನಲ್ಲಿ ಬಂದುದನ್ನೆಲ್ಲ

ಮಾಡುವವರೇ. ಬ್ರಹ್ಮನಿಂದಲೂ ಬದಲಿಸಲು ಸಾಧ್ಯವಿಲ್ಲ."

ಅದೇ ದಿನ ಸಂಜೆ ಯಾದವಭಾಬು ಅಫೀಮು ತಿಂದು ಹುಕ್ಕಾ ಸೇದುತ್ತ ತಲೆಗೇರಿದ ನಿಶೆ ಇಳಿಯದಂತೆ ಮಾಡುತ್ತಿದ್ದ. ಕದದ ಸದ್ದಾಯಿತು. ಬಾಗಿಲನ್ನು ಬಡಿದು, ಚಿಲಕವನ್ನು ಅಲುಗಾಡಿಸಿದಂತೆ ಆಯಿತು.

ಬಹು ಕಷ್ಟದಿಂದ ಯಾದವ ಕಣ್ಣು ತೆರೆದೂ ತೆರೆಯಲಾರದೇ "ಯಾರು?" ಎಂದು ತೊದಲಿದ.

ಅನ್ನಪೂರ್ಣೆ ಕೊಠಡಿಯಲ್ಲಿ ನುಗ್ಗಿ,

"ಬಿಂದುವಾಸಿನಿ ಏನೋ ಹೇಳಬಂದಿದ್ದಾಳೆ. ಕೇಳುವಿರಾ?" ಎಂದಳು.

"ಯಾರು! ಬಿಂದೂ.........."

ಬಿಂದುವಾಸನಿಯನ್ನು ಕಂಡರೆ ಆತನಿಗೆ ಮಮತೆ ಉಕ್ಕೇರುತ್ತಿತ್ತು. ಬಿಂದು ಮಾತಾಡಲಿಲ್ಲ. ಅನ್ನಪೂರ್ಣೆಯೇ ಮುಂದುವರಿಸಿದಳು.

"ಅವಳ ಕಂದನ ಕಣ್ಣಲ್ಲಿ ಯಾರಾದರೂ ಲೇಖನಿ ಚುಚ್ಚಿದರೆ ಎಂದು ಅವಳಿಗೆ ಭೀತಿ ಅವನಿಗಾಗಿಯೇ ನಿಮ್ಮ ಮನೆಯ ಜಗುಲಿಯ ಮೇಲೆ ಶಾಲೆ ಬೇಕೆಂದು ಹೇಳಲು ಬಂದಿದ್ದಾಳೆ" ಎಂದು ಬಡಬಡನೇ ಮಾತಾಡಿದಳು.

ಯಾದವ ಸಾಶಂಕಿತನಾಗಿ ಕೈಯಲ್ಲಿದ್ದ ಹುಕ್ಕಾವನ್ನೇ ಬಿಟ್ಟುಬಿಟ್ಟು "ಯಾರು ಚುಚ್ಚಿದರು? ಯಾರಿಗೆ? ಎಲ್ಲಿ ನೋಡುವ?" ಎಂದ.

ಅನ್ನಪೂರ್ಣೆ ನಗುತ್ತ ಆವನ ಕೈಯಲ್ಲಿ ಕೆಳಗೆ, ಬಿದ್ದ ಹುಕ್ಕಾನಲಿಕೆ ತಿರುಗಿ ತುರುಕಿ, "ಯಾರೂ ಹೊಡೆಯಲಿಲ್ಲ. 'ಹೊಡೆದರೆ' ಎಂಬ ಮಾತು" ಎಂದಳು.

ಯಾದವ ಸುಧಾರಿಸಿಕೊಂಡು ಹೇಳಿದ.

"ಹೊಡೆದರೆ,—ಎಂದಲ್ಲವೋ? ನಾನು ಹೊಡೆದರೋ ಎಂ........"

ಬಿಂದುವಾಸಿನಿ, ಬಾಗಿಲ ಹೊರಗೆ ನಿಂತವಳು, ಸಿಟ್ಟಿನಿಂದ ಉರಿದು ಉರಿದು ಬಿದ್ದಳು. ಸೋತ ಕಂಠದಲ್ಲಿ ಅವಳು ನುಡಿದಳು.

"ಅಕ್ಕ, ಆಗ ತಾನು ಈಮಾತು ಕನಸಿನಲ್ಲಿಯೂ ಎಣಿಸುವದಿಲ್ಲ ಎಂದು ಹೇಳಿದ್ದಿರಿ. ಈಗ ನಾನು ಬರುವ ಮೊದಲೇ ಯಾಕೆ ಬಂದು ಹೇಳಿದಿರಿ?"

ಅನ್ನಪೂರ್ಣೆಗೆ ತಾನು ಹೇಳಿದ ರೀತಿ ಚನ್ನಾಗಿಲ್ಲವೆಂದು ಗೊತ್ತೇ ಇತ್ತು. ಅದರ ಪರಿಣಾಮವೂ ಒಳ್ಳೆಯದಾಗಲಾರದು ಎಂದು ತಿಳಿದೂ ಹಾಗೆ ಹೇಳಿ

ದ್ದಳು. ಈಗ ಬಿಂದುವಾಸಿನಿಯು ಸ್ವರಕೇಳಿ ಹೆದರಿದಳು. ಸಿಟ್ಟು ಗಂಡನ ಮೇಲೆ ತಿರುಗಿತು.

“ಅಫೀಮಿನ ಅಮಲಿನಿಂದ ಕಣ್ಣುಗಳು ಮುಚ್ಚುತ್ತವೆ. ಆದರೆ ಕಿವಿಗೂ ಕೇಳಿಸುವದಿಲ್ಲವೇ? ನಾನು ಹೇಳಿದ್ದೇನು? ತಾವು ಕೇಳಿದ್ದೇನು? ಮಗುವಿನ ಕಣ್ಣು ಹೋಯಿತು ಎಂದು ನಾನು ಹೇಳಿದೇನೆ? ಅಯ್ಯೋ! ನನಗಂತೂ ಎಲ್ಲ ರೀತಿಯಿಂದಲೂ ಸಂಕಟ.”

ಬಡಯಾದವನ ಅಮಲು ಝುರ್ರನೇ ಇಳಿಯಿತು. ಕಿಂಕರ್ತವ್ಯಮೂಢ ನಾಗಿ ಆತ ಗಡಬಡಿಸಿದ.

“ಅರೇ! ಏನಾಯಿತಪ್ಪಾ.”

“ಆಗುವದೇನಿದೆ, ಎಲ್ಲಾ ಆಗಿಹೋಯಿತು. ನಿಮ್ಮ ಹತ್ತಿರ ಮಾತಾಡು ವದೂ ಒಂದೇ, ಆಡದಿದ್ದರೂ ಒಂದೇ. ಎಲ್ಲಾ ನನ್ನ ಕರ್ಮ” ಎಂದಂದು ಸಿಟ್ಟಿನಿಂದ ಧಪಧಪ ಹೆಜ್ಜೆ ಹಾಕುತ್ತ ಅನ್ನಪೂರ್ಣೆ ಕೋಣೆಯೊಳಗಿಂದ ಹೊರಟು ಹೋದಳು.

“ಏನಾಯಿತಮ್ಮಾ, ನೀನಾದರೂ ಹೇಳು.” ಯಾದವ ಏನೂ ಮಾಡ ಲಾರದೇ ಬಿಂದುವಿಗೆ ಕೇಳಿದ.

“ಹೊರಗೆ....ಜಗಲಿಯ ಮೇಲೆ ಒಂದು ಶಾಲೆ ಇದ್ದಿದ್ದರೆ..........” ಸಾವ ಕಾಶವಾಗಿ ಬಿಂದುವಾಸಿನಿ ಒಂದೊಂದೇ ಶಬ್ದವನ್ನುಚ್ಚರಿಸುತ್ತ ನುಡಿದಳು.

“ಇದು ಯಾವ ದೊಡ್ಡಮಾತು. ಆದರೆ...... ಅದರಲ್ಲಿ ಓದುವವರು ಯಾರು?”

“ಮಗು, ಅಮೂಲ್ಯ....ಉಪಾಧ್ಯಾಯರು ಬಂದಿದ್ದರು. ಅವರಿಗೆ ತಿಂಗ ಳಿಗೆ ಹತ್ತುರೂಪಾಯಿ ಕೊಟ್ಟರೆ ಅವರು ಸಂತೋಷದಿಂದ ಇಲ್ಲಿಯೇ ಶಾಲೆ ತೆರೆಯಬಹುದಲ್ಲವೇ?

ಯಾದವ ಸಂತೋಷದಿಂದ—

“ಒಳ್ಳೆಯ ಮಾತು. ನಾಳೆಯೇ ಆಳುಗಳಿಗೆ ಹೇಳಿ ಸ್ವಲ್ಪ ರಿಪೇರಿ ಮಾಡಿಸುತ್ತೇನೆ. ಗಂಗಾರಾಮ ಉಪಾಧ್ಯಾಯರು ಇಲ್ಲಿಯೇ ಶಾಲೆ ತೆರೆದರೆ ಚೆನ್ನಾಗಬಹುದು.” ಎಂದ.

ಭಾವನ ಉತ್ತೇಜಕ ಮಾತು ಕೇಳಿದ ಮೇಲೆ ಬಿಂದುವಿನ ಸಿಟ್ಟು ಶಾಂತ

ಗೊಂಡಿತು. ಅವಳು ಪ್ರಸನ್ನ ಮುಖ್ರೆಯಿಂದ ಅಡಿಗೆ ಮನೆಗೆ ಹೋದಳು. ಅಲ್ಲಿ ಅನ್ನಪೂರ್ಣೆ ಮುಖಗಂಟಿಕ್ಕಿ ಕುಳಿತಿದ್ದಾಳೆ. ಅವಳ ಬದಿಯಲ್ಲೇ ಸ್ವಲ್ಪದೂರ ದಲ್ಲಿ ಕುಳಿತು ಕೆಲಸದವಳು ಕೈಗಳನ್ನು ತಿರಿಗಿಸುತ್ತ ಹಾವ-ಭಾವದಿಂದ ಏನೋ ಹೇಳುತ್ತಿದ್ದಾಳೆ. ಬಿಂದುವಾಸಿನಿ ಒಳ ನುಗ್ಗುತ್ತಿದುದ್ದನ್ನು ಕಂಡು ಕೂಡಲೇ "ಅವ್ವಯ್ಯಾ, ಇಮೋ" ಎಂದು ತನ್ನ ಮಾತನ್ನು ಅಷ್ಟಕ್ಕೆ ಮುಕ್ತಾಯ ಗೊಳಿಸಿದಳು. ಬಿಂದುವಾಸಿನಿ ಅರಿಯದವಳೇ. ಅವಳಿಗೆ ಕೂಡಲೇ ತಿಳಿಯಿತು. ತನ್ನ ಮಾತನ್ನೇ ಅವರು ಆಡುತ್ತಿದ್ದರೆಂಬುದು ಅವಳು ಮುಂದುವರಿದು, ಕೆಲಸ ದವಳ ಎದುರು ನಿಂತು ಸೊಂಟದ ಮೇಲೆ ಕೈಯಿಕ್ಕಿ "ಏನು? ಎಲ್ಲಿ—ಹೇಳು ತ್ತೀಯೋ ಎಲ್ಲವೋ" ಎಂದು ಗದ್ದರಿಸಿದಳು.

ಹೆದರಿಕೆಯಿಂದ ಜೀವ ಹೋದಂತಾಯಿತು ಕೆಲಸದವಳಿಗೆ. ಮಾತಾಡಲು ಬಾಯೇ ಬರಲಿಲ್ಲ. ತೊದಲುತ್ತ ನುಡಿದಳು.

"ಅರೇ! ಅಮ್ಮಾ....ಹೀಗೆ ತಿಳಿದುಕೊಳ್ಳಿ, ದೊಡ್ಡಮ್ಮ ಹೇಳಿದರು. ನಾನು ಹೇಳಿದೆ. ಯಾವ....ಹೆಸರು...."

"ದೊಡ್ಡಮ್ಮ ಹೇಳಿದರು! ನೀನು ಹೇಳಿದೆ! ಹುಂ, ನಡೆ........ಹೋಗು ತ್ತೀಯೋ ಇಲ್ಲವೋ...."

ಕೆಲಸದವಳಿಗೆ ಅಷ್ಟೇ ಬೇಕಾಗಿತ್ತು. ಕಿಮುಕ್ಕೆನ್ನದೇ ಅಲ್ಲಿಂದ ಜಾರಿದಳು.

ಅನ್ನಪೂರ್ಣೆಯ ಕಡೆಗೆ ತಿರುಗಿ,

"ಹಿರಿಯ ಯಜಮಾನಿತಿಯ ಸಲಹೆಗಾರರು ಬಹಳ ಮಂದಿ ಇದ್ದಾರೆ, ಹುಂ. ಯಜಮಾನರಿಗೆ ಹೇಳಿ ಅವರ ಸಂಬಳ ಹೆಚ್ಚಿಸಬೇಕಾಯಿತು" ಎಂದಳು ವ್ಯಂಗ್ಯದಿಂದ.

ಬಿಂದು ಉಳಿದ ವೇಳೆಯಲ್ಲಿ ಅನ್ನಪೂರ್ಣೆಗೆ "ಅಕ್ಕ" ಎಂದು ಸಂಭೋ ಧಿಸುತ್ತಿದ್ದಳು. ಸಿಟ್ಟಿಗೆದ್ದಾಗ ಅಕ್ಕ "ಹಿರಿಯ ಯಜಮಾನಿತಿ" ಆಗುತ್ತಿದ್ದಳು. ಅನ್ನಪೂರ್ಣೆಗೂ ರೇಗಿತು.

"ನಡೆ ಹೇಳು, ಹೇಳಿಬಾ ಹೋಗು. ಯಜಮಾನರು ನನ್ನ ತಲೆ ತೆಗಿಸ ಬಹುದು. ಯಜಮಾನರೇನು ಕಡಿಮೆಯೇ? ನೀನು ಹೇಳಿದ ಕ್ಷಣ 'ಹೂಂ ಅಡ್ಡಿಯಿಲ್ಲ ಈಗಲೇ ಮಾಡುವಾ ಅದಕ್ಕೇನು?' ಎನ್ನಬಹುದು. 'ಅಯ್ಯೋ! ನಾನು ಬಹಳ ಭಾಗ್ಯವಂತೆ. ಬಿಂದೂ ಆದರೆ ನಿನ್ನಂಥ ಘಟ್ಟ ಭಾಗ್ಯದವಳನ್ನು

ನೋಡಲೇ ಇಲ್ಲವಮ್ಮಾ! ಅಬ್ಬಾ-ಎಂತಹ ಸುಸ್ವೈವಿ ನೀನು! ಸ್ವರ ಕೇಳಿದರೇನೇ ಎಲ್ಲರೂ ನಡಗುತ್ತಾರೆ!"

ಬಿಂದುವಾಸಿನಿಯ ಕೋಪ ಸಾವಕಾಶವಾಗಿ ಏರುತ್ತಿದ್ದರೂ, ಅನ್ನಪೂರ್ಣೆ ಹೇಳುವ ರೀತಿ ಕೇಳಿ ಅವಳಿಗೆ ನಗುಬಂದಿತು.

"ಏಕೆ? ನೀವು ಹೆದರುವದಿಲ್ಲವೇ?"

"ಹೆದರುವದಿಲ್ಲ? ನಿನ್ನ ರಣಚಂಡಿಕೆಯ ಅವತಾರ ಕಂಡರೆ ಯಾರಿಗೆ ತಾನೇ ಎದೆಯ ರಕ್ತ ನೀರಾಗಲಿಕ್ಕಿಲ್ಲ! ಆದರೆ ಇಷ್ಟು ಸಿಟ್ಟು ತರವಲ್ಲವಮ್ಮಾ. ನೀನೇನು ಚಿಕ್ಕವಳಲ್ಲ. ಮಕ್ಕಳಾಗುತ್ತಿದ್ದರೆ ಇಷ್ಟೊತ್ತಿಗೆ ನಾಲ್ಕು ಮಕ್ಕಳ ತಾಯಿಯಾಗು ತಿದ್ದಿ!.....ಪಾಪ! ದೋಷ ನಿನ್ನೊಬ್ಬಳದಲ್ಲ. ಆ ಮುದುಕ ಮನುಷ್ಯರ ಅತಿ ಪ್ರೀತಿ, ಮಮತೆಗಳು ನಿನ್ನ ತಲೆ ತಿರುಗಿಸಿಬಿಟ್ಟಿವೆ."

"ಭಾಗ್ಯದ ಮಾತು ನಿಜಕ್ಕೂ ನನಗೆ ಅನ್ವಯಿಸುತ್ತದೆ. ಸಂಪತ್ತು, ಮಕ್ಕಳು-ಮರಿ, ಪ್ರೀತಿ - ವಿಶ್ವಾಸಗಳು ಎಲ್ಲರಿಗೂ ದೊರೆಯಬಹುದಾದಂಥವು ಗಳು. ದೇವ ಮನುಷ್ಯರಂತಹ ಭಾವನವರು ದೊರಕುವದು ಲಕ್ಷಕ್ಕೊಂದು. ತಪಸ್ಸು ಮಾಡಿಬರಬೇಕು. ಗ್ರಹಬಲ ಕೂಡಿಬರಬೇಕು. ಅಂದರೇನೇ ಫಲ ದೊರಕುವದು. ಪ್ರೀತಿ, ಮಮತೆಗಳಿಂದ ನನ್ನ ತಲೆ ತಿರುಗಿಸಿದವರು ಅವರಲ್ಲ; ನೀವು." ಬಿಂದು ನುಡಿದಳು.

ಅನ್ನಪೂರ್ಣೆಗೆ ದಿಗಿಲಾಯಿತು. ಗಲ್ಲದ ಮೇಲೆ ಕೈಯಿರಿಸಿ ಹಣಿಗಂಟಿಕ್ಕಿ ಅಂದಳು, "ನಾನೇ? ಅಬ್ಬಾ! ಯಾರೋ ಹೇಳಿದಂತೆ ನನ್ನದು ಮಾತು ಎಂದರೆ ತುಂಬ ಕಟ್ಟು ನಿಟ್ಟು. ಆದರೇನು ದೌರ್ಭಾಗ್ಯ, ನನ್ನ ಮಾತು ಈಗ ಇಲ್ಲಿ ಕೇಳು ವವರು ಯಾರು? ಕೆಲಸದವರೆಲ್ಲ ಈಗ ಸರಿ-ಸಮಾನರಾಗಿದ್ದಾರೆ. ಅವರೇ ಯಜಮಾನರಾಗಿದ್ದಾರೆ. ಅವರ ಮಾತು ನಾವು ಕೇಳಬೇಕು.... ಬೇರೆಯವ ರಾಗಿದ್ದರೆ...."

ಅನ್ನಪೂರ್ಣೆಯ ವಿಚಿತ್ರ ಅರ್ಥವಿಲ್ಲದ ಬಡಬಡಿಕೆ ಕೇಳಿ ಬಿಂದುವಾಸಿನಿಗೆ ನಗು ತಡೆಯಲಾಗಲಿಲ್ಲ. ಬಿದ್ದು ಬಿದ್ದು ನಕ್ಕಳು.

"ಅಕ್ಕ ನೂರು ವರ್ಷ ಬಾಳಿ ನೀವು. ನನಗಂತೂ ಜಗಳಾಡುವದು ಬೇಡ." ಎನ್ನುತ್ತ ಒಮ್ಮೆಲೇ ಅನ್ನಪೂರ್ಣೆಯ ಎದುರು ಮಂಡಿಯೂರಿ ಅವಳ ತೊಡೆಯ ಮೇಲೆ ಕೈಯೂರಿ "ಎಲ್ಲಿ ಅಕ್ಕಾ, ಒಂದು ಕತೆ ಹೇಳಿ" ಎಂದಳು,

ಮುಗುಳು ನಗೆಯಿಂದ.

ಅನ್ನಪೂರ್ಣೆಗೆ ಕೋಪ ಉಕ್ಕಿತು. "ಸರಿ ಅಜೆ."

ಇಷ್ಟರಲ್ಲಿ ಕೆಲಸದವಳು ಓಡಿಬಂದು ಹೇಳಿದಳು, "ಅಮೂಲ್ಯನು ಕತ್ತಿಯಿಂದ ಗಾಯ ಮಾಡಿಕೊಂಡಿದ್ದಾನೆ. ಅಳುತ್ತಿದ್ದಾನೆ. ರಕ್ತ ಬರುತ್ತಿದೆ."

ಬಿಂದುವಾಸಿನಿ ತಟ್ಟನೇ ಎದ್ದಳು. "ನೀವೆಲ್ಲ ಏನು ಮಾಡುತ್ತಿದ್ದಿರಿ, ಕತ್ತಿಯಾದರೂ ಅವನಿಗೆ ಎಲ್ಲಿ ಸಿಕ್ಕಿತು?"

"ನಾನು ಹಾಸಿಗೆ ಹಾಸಲು ಕೋಣೆಗೆ ಹೋಗಿದ್ದೆ. ಯಾವಾಗ ಅವನು ಗಾಯ ಮಾಡಿಕೊಂಡನೋ ತಿಳಿಯಲೇ ಇಲ್ಲ...."

"ಹುಂ. ತಿಳಿಯಿತು" ಎಂದು ಅವಳ ಮಾತನ್ನು ಅರ್ಧಕ್ಕೆ ನಿಲ್ಲಿಸಿ ಸರಸರನೇ ಹೊರಟು ಹೋದಳು. ಸ್ವಲ್ಪ ಕಾಲ ಕಳೆದ ಮೇಲೆ ಗಾಯಕ್ಕೆ ಒದ್ದೆ ವಸ್ತ್ರ ಕಟ್ಟಿ ಮಗುವನ್ನೆತ್ತಿಕೊಂಡು ಹೊರಗೆ ಬಂದಳು.

"ಅಕ್ಕಾ, ಎಷ್ಟು ದಿನಗಳಿಂದ ಹೇಳುತ್ತಿದ್ದೆ. ಮಕ್ಕಳಿದ್ದ ಮನೆ, ಕತ್ತಿಗಿತ್ತಿ ತಾಗಿಸಿಕೊಂಡರೆ....ಮೊದಲೇ ಹೇಳಿದ್ದೆ. ನನ್ನ ಮಾತು ಕೇಳಬೇಕಲ್ಲ."

"ನಿನ್ನ ಮುದ್ದು ಮಗು ಗಾಯ ಮಾಡಿಕೊಳ್ಳುವನೆಂದು ಕತ್ತಿಯನ್ನು ಹೊರಗೆ ತೆಗೆಯದೇ ಪೆಟ್ಟಿಗೆಯಲ್ಲೇ ಇಟ್ಟರೆ ಆಗುವದೇ? ತಲೆ ಬುಡವಿಲ್ಲದೇ ಮಾತಾಡಬಾರದು." ಎಂದಳು ಅನ್ನಪೂರ್ಣೆ, ಕೊಂಚ ಸಿಟ್ಟಿಗೇರಿದ ಧ್ವನಿಯಿಂದ.

"ಅವನನ್ನು ನಾಳೆಯಿಂದ ಕಟ್ಟಿ ಹಾಕುತ್ತೇನೆ. ನಿಮ್ಮ ಕೊಠಡಿಗೆ ಹೋಗಲು ಸಾಯುತ್ತಾನೆ. ಏನಿದೆಯೋ ದೇವರೇ ಬಲ್ಲ!" ಎಂದು ಬಿಂದುವಾಸಿನಿ ನಡುಮನೆಯ ಹೊಸ್ತಿಲು ದಾಟಿದಳು.

ಅನ್ನಪೂರ್ಣೆ ದೊಡ್ಡ ಧ್ವನಿ ತೆಗೆದು—ಬಿಂದುವಿಗೆ ಕೇಳಿಸಲೆಂದೇ—ಕೂಗಿದಳು,

"ಕೇಳಿದಿಯಾ, ಇವಳ ಸೊಕ್ಕಿನ ಮಾತನ್ನು? ಕೇಳು, ಕೇಳು, 'ಮಗು ಗಾಯ ಮಾಡಿಕೊಂಡರೆ' ಎಂದು ಕತ್ತಿಯನ್ನು ಪೆಟ್ಟಿಗೆಯಲ್ಲೇ ಇಡಬೇಕಂತೆ.... ಅಹಾಹಾ!"

ಕೆಲಸದವಳು ಏನೋ ಹೇಳಲು ಬಾಯಿ ತೆರೆದಳು ಅಷ್ಟಕ್ಕೆ ಮುಚ್ಚಿ ಸುಮ್ಮನಾದಳು.

ಬಿಂದು ಒಮ್ಮೆಲೇ ನಡುಮನೆಯಲ್ಲಿ ಹಾರಿ, "ಇನ್ನೊಂದಾದರೂ ಕೆಲಸದವರನ್ನು ಪಂಚರನ್ನಾಗಿ ಮಾಡಿದರೆ ನಾನು ಮಗುವನ್ನೆತ್ತಿ ತವರಿಗೆ ಹೋಗುತ್ತೇನೆ. ಕೆಲಸದವರ ಹತ್ತರ ಅಷ್ಟೊಂದು ಸಲಿಗೆ !"

ಅದಕ್ಕೆ ಅನ್ನಪೂರ್ಣೆ "ಹೋಗಲ್ಲ. ಯಾರು ಬೇಡವೆಂದವರು ? ತಲೆಯ ಮೇಲೆ ಆಕಾಶ ಕಳಚಿ ಬಿದ್ದರೂ ಕರೆಸುವದು ಮಾತ್ರ ನನ್ನಿಂದಾಗಲಿಕ್ಕಿಲ್ಲ.... ನೆನಪಿನಲ್ಲಿರಲಿ" ಎಂದಳು.

"ನನಗೂ ಬರಬೇಕಾಗಿಲ್ಲ....ನೆನಪಿನಲ್ಲಿರಲಿ" ಅವಳ ಧಾಟಿಯಲ್ಲಿಯೇ ಅವಳನ್ನು ಅಣಕಿಸಿದಳು ಬಿಂದು. ಸಿಟ್ಟನಿಂದ ಆರಕ್ತವಾಗಿತ್ತು ಅವಳ ಮುಖ. ಗೊಣಗುತ್ತ ತನ್ನ ಕೊಠಡಿಯ ಕಡೆ ನಡೆದಳು.

ಸುಮಾರು ಎರುಡು ತಾಸಿನ ನಂತರ ಅನ್ನಪೂರ್ಣೆ ಬಿಂದುವಾಸಿನಿಯ ಕೋಣೆಯಕಡೆಗೆ ಹೋದಳು. ತೊಟ್ಟಿಯ ಒಂದು ಮೂಲೆಯಲ್ಲಿ ಒಂದು ಮೇಜು ಎರಡು ಮೂರು ಕುರ್ಚಿಗಳಿದ್ದವು. ಒಂದು ಭೂತಾಕಾರದ ಕಪಾಟು, ಅದರ ಬದಿಯಲ್ಲಿಯೇ ಮಾಧವ ಮುಖರ್ಜಿಯ ತಿರುಗುವ ಖುರ್ಚಿ. ಮಾಧವ ಖುರ್ಚಿಯಲ್ಲಿ ಆಸೀನನಾಗಿ ವಕೀಲಿಯ ಕಾಗದಪತ್ರ ನೋಡುತ್ತಿದ್ದ. ಬಿಂದುವಾಸಿನಿ ತೊಟ್ಟಿಯ ಬದಿಯಲ್ಲೇ ಇದ್ದ ಕೋಣೆಯಲ್ಲಿ ಅಮೂಲ್ಯನನ್ನು ಮಂಚದ ಮೇಲೆ ಮಲಗಿಸಿ ಕತೆ ಹೇಳುತ್ತಿದ್ದಳು.

"ಹೋಗು. ಬಡಿಸಿಟ್ಟಿದ್ದೇನೆ" ಬಿಂದುವಿನ ಕೋಣೆಯ ಬಾಗಿಲಿಗೆ ಬಂದು ಮುಟ್ಟಿದ ಅನ್ನಪೂರ್ಣೆ ಕೊಂಚ ಗಡಸು ಧ್ವನಿಯಲ್ಲೇ ಹೇಳಿದಳು.

"ಹಸಿವಿಲ್ಲ." ಭಾವನಾರಹಿತವಾದ ಸ್ವರದಲ್ಲಿ ಉತ್ತರ ಬಂದಿತು.

ಪುಟ್ಟ ಮಗು ಚಿಕ್ಕಮ್ಮನ ಕುತ್ತಿಗೆಗೆ ಜೋತುಬಿದ್ದು ಅಂದಿತು. "ಚಿಕ್ಕಮ್ಮ ಬರುವದಿಲ್ಲ. ನೀನು ಹೋಗಮ್ಮ."

ಅನ್ನಪೂರ್ಣೆ ಮಗನನ್ನು ಬದಿಗೆ ಸರಿಸಿ ಕೊಂಚ ಗದ್ದರಿಸುವ ಧ್ವನಿಯಲ್ಲಿ "ನೀನು ಸುಮ್ಮನಿರು. ಹೆಚ್ಚೆಚ್ಚು ಮುದ್ದು ಮಾಡುತ್ತಾ ಹೋಗು. ಮಕ್ಕಳು ಸುಶೀಲರಾಗುವರು !" ಎಂದು ವ್ಯಂಗ್ಯ ಮಾತಿನ ಬಾಣವೆಸೆದಳು.

ಬಿಂದುವಾಸಿನಿ ತುಟಿಗಳನ್ನು ಎರಡು ಮಾಡದೇ ಮಗುವಿನತ್ತ ನೋಡಿದಳು ಮಾತ್ರ. ಅಮೂಲ್ಯನಿಗೆ ಆ ದೃಷ್ಟಿಯು ಅರ್ಥವಾಯಿತೋ ಇಲ್ಲವೊ ಆದರೂ ತಾಯಿಗೆ ಹೇಳಿದ, "ನೀನು ಹೋಗಮ್ಮ ಚಿಕ್ಕಮ್ಮ ಕತೆ ಹೇಳುತ್ತಿದ್ದಾಳೆ."

ಅನ್ನಪೂರ್ಣೆಗೆ ಮಗು ಅವಳ ಪಕ್ಷ ವಹಿಸಿದುದು ಸೇರಲಿಲ್ಲ. ಮಗುವಿನತ್ತ ಲಕ್ಷಕೊಡದೇ " ಬರುತ್ತಿದ್ದರೆ ಬಾ. ಇಲ್ಲದಿದ್ದರೆ ನನಗೇನು ? ಇಂದು, ನಿಮ್ಮಿಬ್ಬ ರನ್ನೂ ಹೊರಡಿಸದಿದ್ದರೇ ನಾನು ಅನ್ನಪೂರ್ಣೆ ಅಲ್ಲ" ಎಂದನ್ನುತ್ತ ಮರುಳಿದಳು.

ಮೂಲೆಯಲ್ಲಿ ಕುಳಿತ ಮಾಧವನಿಗೆ ಇವರ ಸಂವಾದ ಕೇಳಿಸುತ್ತಿತ್ತು. ಅನ್ನಪೂರ್ಣೆ ಹೋಗುತ್ತಿರುವ ರೀತಿ ಕಂಡು "ಏನಾಯಿತು." ಎಂದು ಕೇಳಿದನು.

ಅನ್ನಪೂರ್ಣೆ ಮಾತಾಡಲಿಲ್ಲ. ನೇರವಾಗಿ ಅಡಿಗೆಮನೆಗೆ ಹೋದಳು. ಬಿಂದು ಉತ್ತರ ಕೊಟ್ಟಳು.

" ಆಗುವದೇನು ? ಯಜಮಾನಿತಿಗೆ ಸಿಟ್ಟು ಬಂದಾಗ ಏನಾಗುವದೋ ಅದು, 'ಮಕ್ಕಳಿದ್ದ ಮನೆಯಲ್ಲಿ ಕರೆಕತ್ತಿ ಹೊರತೆಗೆಯಬೇಡಿರಿ' ಎಂದು ಹೇಳಿದ್ದೇ ನನ್ನ ತಪ್ಪು—ದೊಡ್ಡ ತಪ್ಪು—ಇಷ್ಟಕ್ಕೆ ಉರಿದು ಬೀಳುತ್ತಿದ್ದಾರೆ."

ಮಾಧವ ನಗುತ್ತ ನುಡಿದ.—

"ನೀನು ಹೆಚ್ಚು ಗದ್ದಲ ಮಾಡಲು ಹೋಗಬೇಡ. ಅತ್ತಿಗೆ ಹೋದ ತರಹ ನೋಡೇ ಅಣ್ಣ ಇಷ್ಟು ಹೊತ್ತಿಗೆ ಬೆಚ್ಚಿ ಕಣ್ಣು ತೆರೆಯುತ್ತಾನೆ."

ಬಿಂದುವಾಸಿನಿ ಅಮೂಲ್ಯನನ್ನು ಎತ್ತಿಕೊಂಡು ಪತಿಯ ಕಡೆ ನೋಡಿ ಮುಗುಳ್ನಕ್ಕು ಅಡಿಗೆಯ ಮನೆಯತ್ತ ಸಾಗಿದಳು.



ಒಬ್ಬ ತಾಯಿಯ ಇಬ್ಬರು ಮಕ್ಕಳು ಅವಳೊಬ್ಬಳ ಆಶ್ರಯದಲ್ಲೇ ಬೆಳೆಯುತ್ತಾರೆ. ತದ್ವಿರುದ್ಧವಾಗಿ ಈ ಇಬ್ಬರು ತಾಯಂದಿರು ಒಬ್ಬ ಮಗನ ಆಶ್ರಯದಲ್ಲಿ ಇನ್ನೂ ಆರುವರ್ಷ ಕಳೆದರು. ಅಮೂಲ್ಯ ಈಗ ದೊಡ್ಡವನಾಗಿದ್ದಾನೆ. ಹೈಸ್ಕೂಲಿಗೆ ಹೋಗುತ್ತಾನೆ. ಎರಡನೇ ವರ್ಗದಲ್ಲಿದ್ದಾನೆ. ಮನೆಯಲ್ಲಿ ಕಲಿಸುವ ಉಪಾಧ್ಯಾಯರನ್ನಿಟ್ಟಿದ್ದಾರೆ. ಇಂದು ಅವರು ಬೆಳಿಗ್ಗೆ ಒಂದೆರಡು ತಾಸು ಕಲಿಸಿ ಹೋಗಿದ್ದರು. ಅಮೂಲ್ಯ ಆಡಲು ಹೊರಗೆ ಹೋಗಿದ್ದ. ಅಂದು ರವಿವಾರ. ಶಾಲೆಗೆ ರಜವಿತ್ತು.

ಅನ್ನಪೂರ್ಣೆ ಎಲ್ಲೋ ಹೋಗಿದ್ದವಳು ಮನೆಯೊಳಗೆ ನುಗುತ್ತ "ಬಿಂದುವಾಸಿನೀ ಏನು ಮಾಡಲ್ಲೇ!" ಎಂದಳು.

ಬಿಂದುವಾಸಿನಿ ತನ್ನ ಕೋಣೆಯಲ್ಲಿ ಅಮೂಲ್ಯನ ಬಟ್ಟೆಗಳನ್ನು ಸರಿಯಾಗಿಡುವದರಲ್ಲಿ ಮಗ್ನಳಾಗಿದ್ದಳು. ಅಮೂಲ್ಯ ಇಂದು ಮಾಧವನ ಜೊತೆಯಲ್ಲಿ ಎಲ್ಲಿಯೋ ದೊಡ್ಡ ಮನುಷ್ಯರ ಭೆಟ್ಟಿಗೆ ಹೋಗುವವನಿದ್ದ. ಇಂದು ಬಿಂದುವಿನ ಮೈಯಲ್ಲಿ ಚೆನ್ನಾಗಿರಲಿಲ್ಲ. ಆದರೂ ತನ್ನ ಕೆಲಸ ಮುಂದುವರಿಸುತ್ತಾ ತಲೆ ಎತ್ತಿ ಸಹ ನೋಡದೇ ಕೇಳಿದಳು. "ಏನು ಹೇಳಬೇಕು ಅಕ್ಕಾ ?"

ಅನ್ನಪೂರ್ಣೆ ತನ್ನ ಮಗನಿಗೆ ಅಷ್ಟು ಬಟ್ಟೆಗಳು ಇವೆಯೆಂದು ಸಹ ಕಲ್ಪನೆ ಮಾಡಿರಲಿಲ್ಲ. ಅವಳಿಗೆ ಬಹಳ ಆಶ್ಚರ್ಯವಾಗಿತ್ತು. ಅನ್ನಪೂರ್ಣೆ ಬಡಕುಟುಂಬದಲ್ಲಿ ಬೆಳೆದವಳು. ಆದರೂ ಆಕೆ ಮನಸ್ಸಿನಲ್ಲಾದ ಭಾವವನ್ನು ಮೋರೆಯ ಮೇಲೆ ತೋರಿಸದೇ ಕೇಳಿದಳು.

"ಇವೆಲ್ಲ ಅಮೂಲ್ಯನ ಬಟ್ಟೆಗಳೇ !"

"ಹುಂ"

"ಎಷ್ಟು ರೂಪಾಯಿ ಹಾಳು ಮಾಡುತ್ತೀ ಬಿಂದು ? ಇದರ ವೆಚ್ಚದಿಂದ ಎಷ್ಟೋ ಬಡವರ ಕಷ್ಟ ನೀಗ ಬಹುದಾಗಿತ್ತಲ್ಲ !"

ಬಿಂದುವಿಗೆ ಕೂಡಲೆ ಅಸಮಾಧಾನವಾಯಿತು. ಆದರೂ ಸ್ವಾಭಾವಿಕ ಕಂಠವಲ್ಲಿ ನುಡಿದಳು,

"ಹುಂ, ನೀಗಬಹುದಾಗಿತ್ತು ಆದರೆ ಬಡವರು ಬಡವರೇ. ಶ್ರೀಮಂತರು

ಶ್ರೀಮಂತರೇ—ಇದರಲ್ಲಿ ನಾವು ದುಃಖಪಡುವದು ಯಾಕಕ್ಕ ?"

"ನಿನ್ನ ಮಾತುಗಳು ದೊಡ್ಡಿಸ್ತನದವೆಂದು ನಿನಗೇ ಅನಿಸುವದಿಲ್ಲವೇ ?" ಸಮಾಧಾನದ ಧನಿಯಲ್ಲೇ ಕೇಳಿದಳು ಅನ್ನಪೂರ್ಣೆ.

"ಏನು ಹೇಳಲಿಕ್ಕೆ ಬಂದಿದ್ದೀರಿ, ಹೇಳಿ ಬಿಡಿರಲ್ಲ. ನನಗೀಗ ಜಗಳಾಡಲು ಸಹ ಪುರುಸೊತ್ತು ಇಲ್ಲ !"

"ಆಹಾಹಾ ! ನಿನಗೆಂದು ಹೊತ್ತು ಸಿಕ್ಕಿದ್ದುಂಟು? ಇಡೀ ದಿನ ದುಡಿಯಬೇಕು. ಅಡಿಗೆ ಮಾಡಿ ಹಾಕಬೇಕು ! ಪಾಪ, ಹೊತ್ತೇ ಸಿಗುವದಿಲ್ಲ !" ಎನ್ನುತ್ತಲೇ ಹೊರಗೆ ಹೋದಳು.

ಮನೆಯ ಆಳು ಬೈರ ಅಮೂಲ್ಯನನ್ನು ಹುಡಕಲು ಹೋಗಿದ್ದ–ಎರಡು ತಾಸು ಹುಡುಕಿ ಬೇಸತ್ತು ಕೊನೆಗೊಮ್ಮೆ ಅವನನ್ನು ಕರಕೊಂಡು ಬಿಂದುವಾಸಿನಿಯ ಕೋಣೆಯ ಹೊರಗಡೆ ನಿಂತುಕೊಂಡ ಬಿಂದು ಅಮೂಲ್ಯನನ್ನು ಕೇಳಿದಳು.

"ಎಲ್ಲಿದ್ದಿ ಇಷ್ಟು ಹೊತ್ತು ?"

ಅಮೂಲ್ಯ ಸುಮ್ಮನಿದ್ದ.

ಬೈರ ಅಂದ, "ಬೀದಿಯ ಗಲ್ಲಿಯ ಮಕ್ಕಳ ಜೊತೆಯಲ್ಲಿ 'ಚಿಣಿ ಫಣಿ' ಆಡುತ್ತಿದ್ದರು."

ಈ ಆಟ ಬಿಂದುವಿಗೆ ಸರ್ವಥಾ ಸೇರುತ್ತಿರಲಿಲ್ಲ. 'ಅದು ಬಡವರ ಆಟ, ಅದನ್ನು ಆಡಬಾರದು' ಎಂದು ಅಮೂಲ್ಯನಿಗೆ ಕಟ್ಟಾಗಿ ಹೇಳಿದ್ದಳು. ಆದರೂ ಆತ ಆಡಲು ಹೋಗಿದ್ದು ಕೇಳಿ ಅವಳಿಗೆ ಬೇಸರವಾಯಿತು.

"ಆಡಬಾರದೆಂದು ಹೇಳಿದ್ದು ಮರೆತು ಹೋಯಿತೇ ?"

ಅಮೂಲ್ಯ ಒಳಗಿಂದೊಳಗೇ ತುಂಬಾ ಹೆದರಿದ್ದ, ಸಣ್ಣ ಧ್ವನಿಯಲ್ಲಿ ಕುಂಯ್‌ಗುಟ್ಟಿ,

"ನಾನು ಅಲ್ಲಿ ಹೀಗೇ ನಿಂತಿದ್ದೆ—ನನ್ನನ್ನು–ಒತ್ತಾಯದಿಂದ,—"

"ಒತ್ತಾಯದಿಂದ ?– ಇರಲಿ ಬಳಿಕ ನೋಡುವ" ಎಂದಂದು ಮಗನಿಗೆ ಆಗತಾನೇ ತೆಗೆದಿರಿಸಿದ ಬಟ್ಟೆಗಳನ್ನು ತೊಡಿಸ ತೊಡಗಿದಳು.

ಎರಡು ತಿಂಗಳ ಮೊದಲು ಅಮೂಲ್ಯನಿಗೆ ಉಪನಯನವಾಗಿತ್ತು. ಅವನು ಟೊಪ್ಪಿಗೆ ಹಾಕಿಕೊಳ್ಳುವದಿಲ್ಲವೆಂದು ಗದ್ದಲ ಮಾಡಿದ್ದ. ಬಿಂದು

ಕೇಳುವವಳೇ? ಒತ್ತಾಯದಿಂದ ಹಾಕಿಸಿದಳು. ಅರ್ಧಕ್ಷೌರ ಮಾಡಿದ ತಲೆಯ ಮೇಲೆ ಜರತಾರೀ ಟೊಪ್ಪಿಗೆಯನ್ನು ಹಾಕಿಕೊಂಡು ಅಮೂಲ್ಯ ಅಳತೊಡಗಿದ್ದ. ಮಾಧವ ಇದೆಲ್ಲ ಸಂಭ್ರಮ ನೋಡಿ, "ಇನ್ನೆಷ್ಟು ಹೊತ್ತಾಗಬಹುದು?" ಎಂದಿದ್ದ. ಮರುಗಳಿಗೆಯಲ್ಲೇ ಅಮೂಲ್ಯನನ್ನು ಕಂಡು ಮಾಧವ ನಕ್ಕಿದ್ದ; "ವ್ಹಾವ್ಹಾ ಮಥುರೆಯ ರಾಜಕೃಷ್ಣನಂತೆ ಕಾಣುತ್ತಿಯಲ್ಲೋ!"

ಅಮೂಲ್ಯನು ನಾಚಿಕೆಯಿಂದ ಟೊಪ್ಪಿಗೆಯನ್ನು ಎಸೆದು ಮಂಚದಮೇಲೆ ಉರುಳಿದನು.

ಬಿಂದು ಸಿಟ್ಟಿನಿಂದ ಅಂದಿದ್ದಳು, "ಮೊದಲೇ ಅಳುತ್ತಿದ್ದಾನೆ ಮತ್ತೇಕೆ ಪೀಡಿಸುತ್ತಿದ್ದೀರಿ."

ಮಾಧವ, "ಅಳಬೇಡ ಮಗನೇ, ನನಗೆ ಹುಚ್ಚರೆಂದಾರು ಜನ. ನೀನು ಅಳಬೇಡ" ಎಂದಿದ್ದ.

ಇಂಥಹದೇ ಘಟನೆಗಳು ಇದರ ಮೊದಲೂ ನಡೆದಿದ್ದವು. ಅಂದು ಬಿಂದುವಾಸಿನಿ ತುಂಬ ಸಿಟ್ಟಿಗೆದ್ದಿದ್ದಳು. ಇಂದು ಅದರ ಪುನರಾವೃತಿಯಾಗುವಧನ್ನು ಅವಳು ಸಹಿಸಲಾರದೇ ಹಿಂದೆ ಆದ ಘಟನೆಗಳ ನೆನಪಾಗಿ ಸಿಟ್ಟಿನಿಂದ ಅಮೂಲ್ಯನ ತಲೆಯ ಮೇಲೆ ಬೀಸಣಿಕೆಯ ಹಿಡಿಯಿಂದ ಕುಟ್ಟಿದಳು. "ನಾನು ಎಲ್ಲ ಕೆಲಸ ಹುಚ್ಚರಂತೆ ಮಾಡುತ್ತೇನಲ್ಲ" ಎಂದು ಮತ್ತೇ ಹೊಡೆದಳು. ಇಷ್ಟಕ್ಕೂ ಬಿಡದೇ ಆಗತಾನೇ ತೊಡಿಸಿದ್ದ ಮಖಮಲಿನ ಬಟ್ಟೆಗಳನ್ನು ತೆಗೆದೊಗೆದಳು.

ಮಾಧವ ಹೆದರಿದ. ಗಡಿಬಿಡಿಯಲ್ಲಿ ಟೊಪ್ಪಿಗೆ ಏರಿಸಿ, ಚಪ್ಪಲಿ ಮೆಟ್ಟಿ ನಡೆದೇ ಬಿಟ್ಟ. "ತಲೆಯ ಮೇಲೆ ಭೂತ ಸವಾರಿಮಾಡಿದೆ ಸ್ವಲ್ಪ ಹೋಗಿ ನೋಡಿ, ಅತ್ತಿಗೆ" ಎಂದು ಹೋಗುವ ಮುನ್ನ ಪಿಸುಗುಟ್ಟಿದ.

"ಏಕೆ ಬಿಟ್ಟದೆ? ಚೆನ್ನಾಗಿ ಕಾಣುತ್ತಿತ್ತು" ಎಂದಳು ಅನ್ನಪೂರ್ಣೆ.

ಬಿಂದುವಾಸಿನಿಗೆ ನಿಜಕ್ಕೂ ಭೂತ ಬಡೆದಂತಿತ್ತು. ಅಮೂಲ್ಯನನ್ನು ಅಲ್ಲೇ ಬಿಟ್ಟು, ತಲೆಯ ಮೇಲೆ ಸೆರಗು ಹೊದ್ದು, ನಮಸ್ಕಾರ ಮಾಡಿದಳು.

"ದಯಮಾಡಿ, ಮಧ್ಯಸ್ತಿಕೆಗೆ ಬರಬೇಡಿ. ನನಗೆ ತಲೆ ಕೆಟ್ಟಿದೆ. ಕೈ ಮುಗಿಯುತ್ತೇನೆ. ಇದೋ—" ಎಂದು ಅಂಗಲಾಚಿದಳು.

ಅನ್ನಪೂರ್ಣೆ ದಿಗಿಲಾಗಿ, ಮಾತಾಡದೇ ನಿಂತಳು.

ಬಿಂದುವಿಗೆ ಆವೇಶ ಹೆಚ್ಚಿತು—ಅಮೂಲ್ಯನ ಕಿವಿ ಹಿಡಿದು ದರದರ ಎಳೆದು

ಕೋಣೆಯಲ್ಲಿ ತಂದು ನಿಲ್ಲಿಸಿದಳು.

"ನೀನೇಷ್ಟು ತುಂಟನಿದ್ದಿಯೋ ಅಷ್ಟೇ ಶಿಕ್ಷೆಯಾಗಬೇಕು. ಇಡೀ ದಿನ ಈ ಕೋಣೆಯಲ್ಲೇ ಬಿದ್ದಿರು. ಯಜಮಾನಿಯವರೇ! ಕೊಂಚ ಹೊರಗೆ ಬನ್ನಿ," ಎಂದು ಬೆಪ್ಪಾಗಿ ನಿಂತ ಅನ್ನಪೂರ್ಣೆಯನ್ನು ಕೊಂಚ ಬಲಾತ್ಕಾರದಿಂದಲೇ ಹೊರಗೆ ಎಳೆದು ಬಾಗಿಲು ಹಾಕಿ ಅಗಣಿ ಸೇರಿಸಿದಳು.

ತೊಟ್ಟಿಯ ಘಡಿಯಾರದಲ್ಲಿ ಒಂದು ಹೊಡೆಯಿತು. ಮನದಲ್ಲಿ ಕಸಿವಿಸಿಗೊಳುತ್ತಿದ್ದ ಅನ್ನಪೂರ್ಣೆಗೆ ಈಗ ತಡೆಯಲಾಗದಾಯಿತು. ಶಾಂತಸ್ವರದಲ್ಲಿ ಬಿಂದುವನ್ನು ಕುರಿತು ನುಡಿದಳು,

"ತಂಗೀ, ಏನಾಗಿದೆ ನಿನಗೆ? ಇಂದು ನಿಜವಾಗಿಯೂ ಅಮೂಲ್ಯನನ್ನು ಬಡಿಸುವದಿಲ್ಲವೇ? ಮನೆಯವರಿಗೂ ಉಪವಾಸವೇ?"

"ಮನೆಯವರ ಇಚ್ಛೆ—".

"ಇಂಥ ಮಾತನ್ನು, ಮನೆಯ ಒಂದೇ ಒಂದು ಮಗು ಅದು ನನ್ನ ನಿನ್ನ ಮಾತು ಬಿಡು. ಯಜಮಾನರು, ನೌಕರ-ಚಾಕರ...."

"ಅದೆಲ್ಲ ಗೊತ್ತಿಲ್ಲ." ನಿರ್ಲಕ್ಷ್ಯಭಾವದಲ್ಲಿ ಬಿಂದು ಉತ್ತರಿಸಿದಳು. ಅವಳ ಹತ್ತಿರ ಕಂಠಶೋಷಣೆ ಮಾಡಿ ಪ್ರಯೋಜನವಿಲ್ಲವೆಂದೆನಿಸಿತು ಅನ್ನಪೂರ್ಣೆಗೆ. ಆದರೂ ಕೊನೆಯ ಪ್ರಯತ್ನ ಮಾಡುವಾ ಎಂದುಕೊಂಡು,—

"ನಾನು ಹೇಳಿದ್ದನ್ನು ಕೊಂಚ ಕೇಳು, ಅಕ್ಕನ ಮಾತಿಗೆ ಬೆಲೆ ಕೊಡು, ಇಂದು ಕ್ಷಮಿಸು ಅವನನ್ನು,—ಪಿತ್ತ—ಗಿತ್ತವಾದರೆ....ಅನುಭವಿಸುವಳು ನೀನೇ" ಎಂದಳು.

ಬಿಂದುವಾಸಿನಿ ಈ ಮಾತು ಕೇಳಿ ನಮ್ರಳಾದಳು. ಕೆಲಸದವಳನ್ನು ಕರೆದು,

"ಹೋಗು ಕರಕೊಂಡು ಬಾ, ಅವನನ್ನು." ಎಂದೆಂದು ಅಕ್ಕನ ಕಡೆಗೆ ತಿರುಗಿ "ಅಕ್ಕ, ಇಂದು ಒಂದು ಮಾತು ಹೇಳುತ್ತೇನೆ. ನನ್ನ ಮಾತಿಗೆ ಇನ್ನು ಯಾರೂ ಬರದಿದ್ದರೆ ಸರಿ."

ಮಾಧವ ವಕೀಲಿ ವೃತ್ತಿ ಪ್ರಾರಂಭಿಸಿದ ಬಳಿಕ ಯಾದವ ತನ್ನ ನೌಕರಿಗೆ ತಿಲಾಂಜಲಿಯಿತ್ತು, ತನ್ನ ಜಮೀನು ಮನೆ-ಮಠ ನೋಡತೊಡಗಿದ. ಬಿಂದುವಾಸಿನಿಯ ಮದುವೆಯ ಹತ್ತು ಸಾವಿರ ರೂಪಾಯಿ ಕೈಯಲ್ಲಿತ್ತು. ಲೇವಾದೇವಿ ಮಾಡಿ ಮೊತ್ತವನ್ನೂ ಸ್ವಲ್ಪ ಏರಿಸಿದ್ದ. ಮಾಧವನ ಉತ್ಪನ್ನ ಏರಿಕೆಯಲ್ಲಿತ್ತು.

ಹೀಗಾಗಿ ಮನೆ ಕಟ್ಟಲು ನಿಶ್ಚಯ ಮಾಡಿ, ಅದನ್ನು ಮುಗಿಸಿದ. ಹತ್ತು ದಿನಗಳ ಹಿಂದೆಯೇ ಹಂಚನ್ನು ಸಹ ಹೊದೆಸಿ ಆಗಿತ್ತು. ದುರ್ಗಾಪೂಜೆಯ ಅನಂತರ ಒಂದು ಒಳ್ಳೆಯ ದಿನ ಅಲ್ಲಿಗೆ ಹೋಗುವದೆಂದು ನಿಶ್ಚಯವಾಯಿತು. ಒಂದು ದಿನ ಊಟ ಮಾಡುತ್ತಿರುವಾಗ ಯಾದವ ಬಿಂದುವಾಸಿನಿಗೆ ಹೇಳಿದ, "ಮಗೂ, ನಿನ್ನ ಮನೆ ತಯಾರಾಗಿ ನಿಂತಿದೆ. ಅಲ್ಲಿ ಹೋಗಲು ಒಂದು ಒಳ್ಳೆಯ ದಿನ ಹುಡುಕಿ ತೆಗೆ ನೋಡೋಣ? ಮತ್ತೇನಾದರೂ ಸುಧಾರಣೆ ಆಗುವದಿದೆಯೇ?"

ಯಾದವನ ಊಟದ ಹೊತ್ತಿಗೆ ಸಾವಿರ ಕೆಲಸಗಳಿದ್ದರೂ ಅವನ್ನೆಲ್ಲ ಬಿಟ್ಟು ಬಾಗಿಲ ಬಳಿ ಕುಳಿತುಕೊಳ್ಳುವದು ಬಿಂದುವಿನ ರೂಢಿಯಾಗಿ ಬಿಟ್ಟಿತ್ತು. ಅವಳೊಬ್ಬಳಿಗೆ ಮಾತ್ರ ಯಾದವನನ್ನು ಕಂಡರೆ ಆದರ್ಯವಿತ್ತೆಂದಲ್ಲ, ಎಲ್ಲರಿಗೂ ಹಾಗೆಯೇ. ಅವನ ಸ್ವಭಾವ ಹಾಗಿತ್ತು.

ಬಿಂದುವಾಸಿನಿ ಉತ್ತರ ಕೊಟ್ಟಳು,

" ಇಲ್ಲ, ಏನೂ ಇಲ್ಲ "

" ನೋಡುವ ಮೊದಲೇ 'ಏನೂ ಇಲ್ಲ' ಎಂದೆಯಲ್ಲ ? ಹುಂ. ಇರಲಿ. ಒಂದು ಮಾಡು. ನಮ್ಮ ಎಲ್ಲ ಸಂಬಂಧಿಕರನ್ನು ಕರೆಸಿ ಒಂದೆರಡು ದಿನ ಇರಿಸಿ ಕೊಳ್ಳುವಾ ಎಂದು ಯೋಚನೆ ನನಗೆ. ಅಲ್ಲಿ ಹೋಗಿ ಗೃಹಪೂಜೆ ಮಾಡುವ. ಆಗದೇ ?" ಯಾದವ ನಕ್ಕ.

"ಅಕ್ಕ, ಇದ್ದಾರಲ್ಲ, ಅವರೆಂದ ಹಾಗೆ " ಬಿಂದು ಸಾವಕಾಶವಾಗಿ ಉತ್ತರ ಕೊಟ್ಟಳು.

"ಹುಂ. ಆದರೆ ನೀನು ನಮ್ಮ ಮನೆಯ ಲಕ್ಷ್ಮಿ, ನಿನ್ನ ಬಯಕೆಯಂತೆ" ಬಡಿಸುತ್ತಿದ್ದ ಅನ್ನಪೂರ್ಣೆ ನಗುತ್ತ ಅಂದಳು.

" ಆದರೆ ನಿಮ್ಮ ಲಕ್ಷ್ಮಿ ಶಾಂತಳಿದ್ದರೆ ತಾನೆ........"

" ಶಾಂತಳಾಗಿರುವ ಮಾತು ಎಲ್ಲಿಂದ ಬಂತು ? ಅವಳು ನಿಜಕ್ಕೂ ಲಕ್ಷ್ಮಿ ಇದ್ದಂತೆ. ಅವಳನ್ನು ಕರೆದು ತಂದ ನಂತರ ನನ್ನ ಕಷ್ಟಗಳೆಲ್ಲ ಮಾಯ ವಾದವು."

" ಹಾಗಾದರೆ ನಿಮ್ಮ ಮಾತೇ ಸರಿಯನ್ನಿ. ಇವಳು ಬರುವದಕ್ಕಿಂತ ಮೊದಲಿನ ದಿನಗಳು ನಮ್ಮ ವೈರಿಗೂ ಬರಬಾರದು !" ಎಂದಳು ಅನ್ನಪೂರ್ಣೆ.

ಬಿಂದುವಾಸಿನಿ ಯಾದವನ ವರ್ಣನೆ ಕೇಳಿ ನಾಚಿಕೆಯಿಂದ ತಲೆತಗ್ಗಿಸಿ

ದವಳು ಈಗ ನುಡಿದಳು, "ಕರೆಸಿದರಾಯಿತು. ಬೇಕಾದವರನ್ನು ಕರೆಸಿ. ನನ್ನ ಆ ಮನೆ ಸಾಕಷ್ಟು ದೊಡ್ಡದಿದೆ. ಯಾರಿಗೂ ತೊಂದರೆ ಯಾಗಲಿಕ್ಕಿಲ್ಲ. ಬಂದವರು ನಾಲ್ಕಾರು ತಿಂಗಳು ಸಹ ಇರಬಹುದು."

ಯಾದವ ಕೈತೊಳೆಯುತ್ತ ಅಂದ, "ಹಾಗೆಯೇ ಆಗಲಿ, ನಾಳೆಯೇ ಕರೆಸುವ ವ್ಯವಸ್ಥೆ ಮಾಡಿಸುವೆನು."



ಯಾದವನ ಮಲತಂಗಿ ಎಲೋಕೇಶಿಯ ಸ್ಥಿತಿ ಚೆನ್ನಾಗಿದ್ದಿಲ್ಲ. ಯಾದವ ಆಗಾಗ ಅವಳಿಗೆ ಆರ್ಥಿಕ ಸಹಾಯ ಮಾಡುತ್ತಲೇ ಇರುತ್ತಿದ್ದ. ಕೆಲದಿನಗಳಿಂದ ಅವಳು ತನ್ನ ಕಾಗದಗಳಲ್ಲಿ ಮಗ ನರೇಂದ್ರನನ್ನು ಇಲ್ಲಿಯೇ ಇರಿಸಿ ಮುಂದೆ ಓದಿಸಬೇಕೆಂಬ ಯೋಚನೆಯನ್ನು ಕುರಿತಾಗಿ ಬರೆಯುತ್ತಿದ್ದಳು. ಇಷ್ಟರಲ್ಲಿ ಒಂದು ದಿನ ಅವಳು ಮಗನೊಂದಿಗೆ ಉತ್ತರಪಾದದಿಂದ ಬಂದೇ ಬಿಟ್ಟಳು. ಅವಳ ಗಂಡ ಪ್ರಿಯನಾಥ ಎಲ್ಲಿದ್ದಾನೆ ಎಂಬುದು ಯಾರಿಗೂ ಸರಿಯಾಗಿ ಗೊತ್ತಿರಲಿಲ್ಲ. ಆದರೂ ಎರಡು ಮೂರು ದಿನಗಳೊಳಗೆ ಪ್ರಿಯನಾಥನೂ ಬಂದು ತಲ್ಪಿದ. ನರೇಂದ್ರ ಸುಮಾರು ಹದಿನಾರು–ಹದಿನೇಳು ವಯಸ್ಸಿನವ. ಅವನು ಅಂಚಿನ ಧೋತರ ಉಡುತ್ತಿದ್ದ. ದಿನಕ್ಕೆ ಹದಿನೈದುಬಾರಿ ಬಾಚಿಕೊಳ್ಳುತ್ತಿದ್ದ. ಅವನ ಕೂದಲು ಸಹ ನೋಡಲು ಅಂದವಾಗಿದ್ದವು. ಇಂದು ಸಂಜೆ ಎಲ್ಲರೂ ಅಡಿಗೆ ಮನೆಯಲ್ಲಿ ಹರಟೆಹೊಡೆಯುತ್ತ ಕುಳಿತ್ತಿದ್ದರು. ಎಲೋಕೇಶಿ ತನ್ನ ಸುಪುತ್ರನ ರೂಪಗುಣಗಳನ್ನು ಹಾವಭಾವ ಮಾಡಿ ವರ್ಣಿಸುತ್ತಿದ್ದಳು.

ಬಿಂದುವಾಸಿನಿ ನರೇಂದ್ರನನ್ನು ಕೇಳಿದಳು. "ಮಗೂ ನರೇಂದ್ರ, ಯಾವ ಕ್ಲಾಸಿನಲ್ಲಿ ಓದುತ್ತಿ ?"

"ನಾಲ್ಕನೇ ವರ್ಗದಲ್ಲಿ. ರಾಯಲ್ ರೀಡರ, ಗ್ರಾಮರ, ಜಿಯೋಗ್ರಫಿ, ಅರ್ಥಮೆಟಿಕ. ಇಷ್ಟೇ ಅಲ್ಲ, ಡೆಸಿಮಲ್ಸ, ಟೆಸಿಮಲ್ಸ, ನಿಮಗೆ ಅದೆಲ್ಲ ತಿಳಿಯುವ ದಿಲ್ಲ."

ಎಲೋಕೇಶಿ ಹೆಮ್ಮೆಯಿಂದ ಮಗನ ಕಡೆಗೆ ನೋಡಿದಳು. ಬಿಂದುವಿನ ಕಡೆಗೆ ತಿರುಗಿ "ಒಂದು ಮಣ ಪುಸ್ತಕಗಳಿವೆ. ಸ್ವಲ್ಪವಲ್ಲ, ಪುಸ್ತಕಗಳ ರಾಶಿಯೇ ಬಿದ್ದಿದೆ. ಮಗೂ ನರೇಂದ್ರನನ್ನು ನಾಳೆ ನಿನ್ನ ಪುಸ್ತಕಗಳನ್ನಷ್ಟು ಬಿಂದೂ ಅಕ್ಕನಿಗೆ ತೋರಿಸಪ್ಪಾ."

"ಹೂಂ. ತೋರಿಸುತ್ತೇನೆ" ನರೇಂದ್ರ ತಲೆಯಲ್ಲಾಡಿಸುತ್ತ ನುಡಿದ.

"ಪಾಸಾಗಲು ಇನ್ನೂ ಹೊತ್ತು ಇದೆಯೇ ?" ಬಿಂದು ಕೇಳಿದಳು.

"ಸ್ವಲ್ಪ ಹೊತ್ತಿದೆ. ಕೇವಲ ಒಂದು ಸಲ ಏನು ? ನಾಲ್ಕಾರು ಸಲ ಪಾಸಾಗುತ್ತ ಹೋಗುತ್ತಿದ್ದ. ಆದರೆ ಕೇವಲ ಆ ಒಬ್ಬ ಮಾಸ್ತರನಿಂದ ಸರಿಯಾಗಿ

ಪಾಸಾಗುತ್ತಿಲ್ಲ. ಅವನ ಕುಲ ಹಾಳಾಗಲಿ, ನನ್ನ ಕಂದನನ್ನು ಎಂಥ ದುಷ್ಟದೃಷ್ಟಿಯಿಂದ ನೋಡುತ್ತಾನೆ ಗೊತ್ತೇ? ಮೇಲಿನ ವರ್ಗಕ್ಕೆ ಏರಿಸುವದು ದೂರವಲ್ಲೇ ಉಳಿಯಿತು. ಸಾಯಲಿ! ಇವನ ಮೇಲಿನ ಹೊಟ್ಟೆಯುರಿಯಿಂದ ಈ ವರೆಗೆ ಒಂದೇ ಕ್ಲಾಸಿನಲ್ಲಿರಿಸಿದ್ದಾನೆ!"

ಬಿಂದುವಾಸಿನಿ ವಿಸ್ಮಿತಳಾದಳು. "ಛೀ ಹಾಗೆಂದೂ ನಡೆಯುವದಿಲ್ಲವಲ್ಲ.?"

"ನಿನಗೇನು ಗೊತ್ತು? ನಡೆಯುತ್ತದೆ. ಎಲ್ಲಿಯೂ ಸರಾಗವಾಗಿ ನಡೆಯುತ್ತದೆ. ಮಾಸ್ತರರಿಗೆ ಲಂಚಕೊಡಬೇಕು. ನನ್ನ ಹತ್ತರ ಎಲ್ಲಿಂದ ಈ ಲಂಚ ಬರಬೇಕು?"

ಬಿಂದುವಾಸಿನಿ ಸುಮ್ಮನಾದಳು. ಅನ್ನಪೂರ್ಣೆ ದುಃಖದಿಂದ ನುಡಿದಳು. "ಹೀಗೆ ಒಬ್ಬರ ಹಿಂದೆ ಒಂದೇ ಸವನೆ ತಾಗಿ ತೊಂದರೆಯೊಡ್ಡುವದು ಸರಿಯೇ? ಇದೇನು ಒಳ್ಳೆಯ ಕಾರ್ಯವೇ? ಆದರೆ ಇಲ್ಲಿ ಅಂಥಹದೆಲ್ಲ ನಡೆಯುವದಿಲ್ಲ. ನಮ್ಮ ಮಗು ಪ್ರತಿ ವರುಷ ಪಾರಿತೋಷಕ ಪಡೆಯುತ್ತಲೇ ಇರುತ್ತಾನೆ. ಇಲ್ಲಿ ಲಂಚ ಗಿಂಚದ ಮಾತು ನಡೆಯುವದಿಲ್ಲ."

ಅನ್ನಪೂರ್ಣೆಯ ಮಾತು ಮುಗಿಯುವದರೊಳಗಾಗಿ, ಅಮೂಲ್ಯ ಎಲ್ಲಿಂದಲೋ ಓಡಿ ಬಂದು ಚಿಕ್ಕಮ್ಮನ ತೊಡೆಯ ಮೇಲೇರಿ ಕುಳಿತು ಅವಳ ಕುತ್ತಿಗೆಗೆ ತೂಗಿ ಬಿದ್ದು ಕಿವಿಯಲ್ಲಿ ಹೇಳಿದ.

"ನಾಳೆ ರವಿವಾರ– ಮಾಸ್ತರರಿಗೆ ನಾಳೆ ಬಾ ಎಂದು ಹೇಳಿ." ಬಿಂದು ಅವನ ತಲೆ ನೇವರಿಸುತ್ತ ನಕ್ಕಳು.

"ಹುಚ್ಚು ಹುಡುಗ!" ಎಂದಂದು ಕೆಲಸದವಳನ್ನು ಕರೆದು,

"ಲೇ, ಮಾಸ್ತರರಿಗೆ ನಾಳೆ ಬೆಳಿಗ್ಗೆ ಬರಲು ಹೇಳು." ಕೂಗಿ ನುಡಿದಳು.

ನರೇಂದ್ರ ಇದೆಲ್ಲ ಅಚ್ಚರಿ ಬಟ್ಟು ನೋಡುತ್ತಲಿದ್ದ.

"ಇದೇನೋ ಅಮೂಲ್ಯ, ಇಷ್ಟು ದೊಡ್ಡವನಾದಿ, ಇನ್ನೂ ಹೆಂಗಸರ ತೊಡೆಯೇರಿ ಕುಳಿತುಕೊಳ್ಳುತ್ತಿಯಲ್ಲೋ!"

ಬಿಂದು ನಗುತ್ತ ನುಡಿದಳು.

"ಅವನು ಮಾಡುವದು ಇಷ್ಟೇನೆ! ಹುಂ– ರಾತ್ರಿ ......"

ಅಮೂಲ್ಯ ವ್ಯಾಕುಲನಾಗಿ ಕೈಯಿಂದ ಅವಳ ಬಾಯಿ ಮೇಲೆ ಕೈಯಿರಿಸಿದ.

"ಚಿಕ್ಕಮ್ಮಾ ಹೇಳಬೇಡವಮ್ಮಾ." ಚಿಕ್ಕಮ್ಮ ಹೇಳಲಿಲ್ಲ. ಆದರೆ ತಾಯಿ ಹೇಳಿಯೇ ಬಿಟ್ಟಳು.

"ಆವನು ಈಗಲೂ ಸಹ ಚಿಕ್ಕಮ್ಮನೊಡನೆ ಮಲಗುತ್ತಾನೆ!"

"ಅಷ್ಟೇ ಅಲ್ಲ! ಉಡದ ಹಾಗೆ ಮೈಗೆ ಮೈ ತಾಗಿಸಿ...." ಬಿಂದುವಾಸಿನಿಗೆ ತಡೆಯಲಾಗಲಿಲ್ಲ, ನುಡಿದೇ ಬಿಟ್ಟಳು.

ಅಮೂಲ್ಯ ನಾಚಿಕೆಯಿಂದ ತನ್ನ ತಲೆಯನ್ನು ಚಿಕ್ಕಮ್ಮನ ಸೆರಗಿನಲ್ಲಿ ಹುದುಗಿಸಿದ.

ನರೇಂದ್ರ ಕೆಣಕಿದ, "ಛೀ, ಛೀ, ಎಂಥವನೋ ನೀನು? ಇಂಗ್ಲೀಷು ಓದುತ್ತೀಯಾ?" ಬಿಂದುವಾಸಿನಿ ಉತ್ತರ ಕೊಟ್ಟಳು,

"ಓದದೇನು? ಶಾಲೆಯಲ್ಲಿ ಇಂಗ್ಲೀಷೇ ಕಲಿಯುತ್ತಾನೆ."

"ಸರಿ. ಎಲ್ಲಿ, "ಇಂಜೀನ್"ದ ಸ್ಪೆಲ್ಲಿಂಗ ಹೇಳು ನೋಡೋಣ."

ಎಲೋಕೇಶಿ ಇಷ್ಟೊತ್ತು ಸುಮ್ಮನಿದ್ದವಳು ಮಗನಿಗೆ ಹೇಳಿದಳು. "ಇವೆಲ್ಲ ಕಠಿಣ ವಿಷಯಗಳು. ಪಾಪ! ಇನ್ನೂ ಮಗು...."

"ಮಗೂ, ಹೇಳೀ ಬಿಡು ನೋಡೋಣ" ಅನ್ನಪೂರ್ಣೆಗೂ ಮಗನ ಬುದ್ಧಿ ಪರೀಕ್ಷಿಸಬೇಕೆಂಬ ಆಸೆಯಾಯಿತು,

ಬಿಂದುವಾಸಿನಿ ಉಕ್ಕೇರುವ ಮಮತೆಯಿಂದ ಅಮೂಲ್ಯನ ತಲೆಯನ್ನು ಎದೆಗವಚಿಕೊಂಡು ನುಡಿದಳು.

"ನೀವೆಲ್ಲ ಸೇರಿ ಅವನನ್ನು ಚೇಷ್ಟೆ ಮಾಡಿದ್ದೀರಿ ಪಾಪ! ನಾಚಿಕೆ ಅವನಿಗೆ. ಈಗ ಅವನೇನು ಹೇಳುವ!" ಎಲೋಕೇಶಿಯ ಕಡೆಗೆ ತಿರುಗಿ, ತನ್ನ ಮಗನೂ ಕಡಿಮೆಯಲ್ಲವೆಂಬರ್ಥದಿಂದ "ಈ ಸಲ ಇವನೂ ಪರೀಕ್ಷೆಗೆ ಕೂಡುತ್ತಾನೆ. ಅವನಿಗೆ ೨೦ ರೂಪಾಯಿ ಇನಾಮು ದೊರಕುವದು ನಿಸ್ಸಂಶಯವೆಂದು ಮಾಸ್ತರರು ಹೇಳಿದ್ದಾರೆ. ಆ ಹಣದಿಂದ ಆತ ಚಿಕ್ಕಪ್ಪನಿಗೆ ಕುದುರೆ ಕೊಳ್ಳುವವ ನಿದ್ದಾನೆ.— ಅಲ್ಲವೇ ಮಗೂ!" ಅಭಿಮಾನಯುಕ್ತವಾದ ಕಂಠದಲ್ಲಿ ಮಗನ ಕಡೆ ನೋಡುತ್ತ ನುಡಿದಳು.

ಮಾತು ಸತ್ಯಕ್ಕೆ ಸಮೀಪವಾಗಿದ್ದರೂ ಅದನ್ನು ಚೇಷ್ಟೆಗೊಯ್ದು ಎಲ್ಲರೂ ನಕ್ಕರು.

ಎಲೋಕೇಶಿಯ ಅಭಿಮಾನ ಕೆಣಕಿದಂತಾಗಿತ್ತು. 'ನರೇಂದ್ರ ಅಮೂಲ್ಯನಿಗಿಂತ ಕಡಿಮೆಯವನಲ್ಲ' ವೆಂಬರ್ಥದಿಂದ ಪರ್ಯಾಯವಾಗಿ ನುಡಿದಳು

"ನನ್ನ ನರೇಂದ್ರ ಕೇವಲ ಅಭ್ಯಾಸದಲ್ಲಿ ಜಾಣನಲ್ಲ, ಅವನು ನಾಟಕ

ಮಾಡುತ್ತಾನೆ, ಹಾಡುತ್ತಾನೆ. ನಾಟಕ ಮಂದಿರದಲ್ಲಿ ಆತ ಜನರೂ ಕೂಡ ಕಣ್ಣೀರು ಸುರಿಸುವಂತೆ ಅಭಿನಯಿಸುತ್ತಾನೆ. ಓ! ಒಂದು ಸಲ ಸೀತೆಯ ಪಾತ್ರ ವಹಿಸಿದ್ದ! ಆಹಾಹಾ! ಮಗೂ, ತೋರಿಸಪ್ಪಾ! ಒಂದೇ ಬಾರಿ. ಎಲ್ಲರೂ ನೋಡಲಿ!"

ಕೂಡಲೇ ನರೇಂದ್ರ ಮಂಡಿಯೂರಿ, ಕೈ ಜೋಡಿಸಿ ಮುಖವೆತ್ತಿ, ಮೂಗಿನಿಂದ ಸ್ವರ ತೆಗೆದು, ನಾಟಕೀಯವಾಗಿ, ತಾನು ಕಂಠಪಾಠ ಮಾಡಿದ್ದ ಮಾತನ್ನು ಪ್ರಾರಂಭಿಸಿಯೇ ಬಿಟ್ಟ.

"ಆಹಾ! ಪ್ರಾಣೇಶ್ವರ! ಎಂಥ ಅಘಟಿತ ಘಟನೆಯಲ್ಲಿ ನಿಮ್ಮ ದಾಸಿ–"

ಬಿಂದುವಿಗೆ ವ್ಯಸನವಾಯಿತು.

"ಅರೇ! ಸಾಕಪ್ಪಾ; ಮೇಲೆ ಯಜಮಾನರಿದ್ದಾರೆ, ಭಾವನವರಿದ್ದಾರೆ ಸಾಕು ಮಾಡು!"

ನರೇಂದ್ರ ಹಾರಿ ಬಿದ್ದು ಕೂಡಲೇ 'ಸೀತೆ'ಯಿಂದ 'ನರೇಂದ್ರ'ನಾದ!

ಅನ್ನಪೂರ್ಣೆ ಅಷ್ಟು ನೋಡಿಯೇ ಮುಗ್ಧಳಾಗಿದ್ದಳು.

"ಕೇಳಿದರೆ ಕೇಳಲಿ! ಇದು ಠಾಕೂರಜಿಯವರ ಕಥೆ. ಕೇಳಿದರೆ ಪುಣ್ಯ ಬರಬಹುದು!" ಮಧ್ಯದಲ್ಲಿಯೇ ನಿಲ್ಲಿಸಿದ್ದರಿಂದ ಅವಳಿಗೆ ಬೇಸರವುಂಟಾಗಿತ್ತು.

"ನೀವೇ ಕೇಳಿರಿ– ನಿಮ್ಮ ಠಾಕೂರಜಿಯವರ ಪುರಾಣ. ನಾನು ಹೊರಗೆ ಹೋಗುವೆ."

ನರೇಂದ್ರನಲ್ಲಿ ಉತ್ಸಾಹ ಚಿಮ್ಮುತ್ತಿತ್ತು.

"ಹಾಗಾದರೆ ಸಾವಿತ್ರಿಯ ಅಭಿನಯ ಮಾಡಲೇ"

"ಬೇಡ"— ನಿರ್ಧಾರದ ಧ್ವನಿಯಲ್ಲಿ ಉತ್ತರ ಬಂದಿತು.

ಬಿಂದುವಿನ ಸ್ವರದಲ್ಲಿ ಆದ ಬದಲಾವಣೆಯ ಅರ್ಥವನ್ನು ಈಗಾಗಲೇ ಅನ್ನಪೂರ್ಣೆ ಊಹಿಸಿಕೊಂಡಿದ್ದಳು. ಮಾತು ತುಂಬ ದೂರ ಹೋಗಿತ್ತು. ಅದನ್ನು ಮತ್ತೇ ಬೆಳೆಸಬಾರದೆಂದೆನಿಸಿತು. ಎಲೋಕೇಶಿ ಹೊಸಬಳು. ಅವಳಿಗೆ ಕಾರಣ ತಿಳಿಯಲಿಲ್ಲ.

"ಇರಲಿ ಈಗ ಸಾಕು ಮಾಡು. ಗಂಡಸರು ಹೋದ ಬಳಿಕ ಹಾಡಿ ತೋರಿಸುವಂತೆ" ಎಂದಳು ಅನ್ನಪೂರ್ಣೆ.

"ಹಾಡುವವರಲ್ಲಿ – ಬಾರಿಸುವವರಲ್ಲಿ ನನ್ನ ನರೇಂದ್ರ ಕಡಿಮೆಯೇ?

ನಳನು ದಮಯಂತಿಯನ್ನು ಕಾಡಿನಲ್ಲಿ ಬಿಟ್ಟು ಹೋದಾಗ ದಮಯಂತಿ ಅಳುತ್ತಾ ಹಾಡುವ ಹಾಡನ್ನು ಬಹಳ ಚೆನ್ನಾಗಿ ಹಾವಭಾವದಿಂದ ಹಾಡುತ್ತಾನೆ ಗೊತ್ತೇ? ಮಗೂ, ಎಂದಾದರೂ ಹಾಡಿ ತೋರಿಸಪ್ಪಾ! ಬಳಿಕ ನಿನ್ನನ್ನೂ ಯಾರೂ ಬಿಡುವದಿಲ್ಲ. ನೋಡು!" ಎಂದಳು ನರೇಂದ್ರನ ತಾಯಿ.

"ಈಗಲೇ ಹಾಡಲೇ?" ನರೇಂದ್ರ ಕೇಳಿದ.

ಸಿಟ್ಟಿನ ಭರದಲ್ಲಿ ಬಿಂದು ನಡಗುತ್ತಿದ್ದಳು. ಅನ್ನಪೂರ್ಣೆ ಕೂಡಲೇ ನುಡಿದಳು. "ಬೇಡ ಬೇಡ! ಈಗೇನು ಬೇಡ. ಎಲ್ಲ ಊಟವಾದ ಮೇಲೆ."

ನರೇಂದ್ರನ ಉತ್ಸಾಹಕ್ಕೆ ತಣ್ಣೀರೆರಚಿದಂತಾಗಿತ್ತು. ಆದರೂ ನುಡಿದ. "ನಾನು ಆ ಹಾಡನ್ನು ಅಮೂಲ್ಯನಿಗೆ ಕಲಿಸುವೆ. ನನಗೆ ತಬಲೆ ಬಾರಿಸಲು ಸಹ ಬರುತ್ತದೆ. ಎಲ್ಲಿ ಅಮ್ಮ, ಆ ಹಿತ್ತಾಳೆ ಕೊಡ ಸ್ವಲ್ಪ ಕೊಡು ನೋಡೋಣ. ತ್ರಿತಾಳ ಬಾರಿಸುವದು ಬಹು ಕಠಿಣ. ಆದರೆ ನಾನು ಸಾಧಾರಣ ಬಾರಿಸಬಲ್ಲೆ."

ಬಿಂದುವಾಸಿನಿ ಅಮೂಲ್ಯನಿಗೆ ಏಳುವ ಸನ್ನೆ ಮಾಡಿದಳು. "ಏಳು ಮಗು. ಕೋಣೆಗೆ ಹೋಗಿ ಓದುತ್ತಾ ಕುಳಿತುಕೋ ನಡೆ." ಎಂದಳು.

ಅಮೂಲ್ಯ ಮುಗ್ಧನಾಗಿ ಕೇಳುತ್ತಿದ್ದ. ಏಳುವ ಮನಸ್ಸಿರಲಿಲ್ಲ. ಲಾಲಿಸುವ ಸ್ವರದಲ್ಲಿ ನುಡಿದ. "ಎರಡೇ ನಿಮಿಷ, ಆಗದೇ?" ಬಿಂದು ಮಾತಾಡಲಿಲ್ಲ. ಅವನನ್ನು ಎಬ್ಬಿಸಿ ತಾನೂ ಎದ್ದು ಕೊಠಡಿ ಸೇರಿದಳು. ಅನ್ನಪೂರ್ಣೆಗೆ ಅವಳ ವರ್ತನೆ ಅರ್ಥವಾಗಿತ್ತು. ಜೊತೆಗೆ ಅವಳಿಗೆ ಮತ್ತೊಂದು ಮಾತೂ ಹೊಳೆದಿತ್ತು. ಅಮೂಲ್ಯ, ನರೇಂದ್ರನ ಜೊತೆಯಲ್ಲಿ ಬಿದ್ದು, ಹಾಳಾಗುವನೆಂಬ ವಿಚಾರ ಬಿಂದುವಾಸಿನಿಗೆ ಬಂದಿದೆ ಎಂದು. ನರೇಂದ್ರ ಇಲ್ಲಿ ಇರುವದೂ ಅವಳಿಗೆ ಸೇರಲಿಕ್ಕಿಲ್ಲ. ಈ ರೀತಿ ಯೋಚಿಸಿ ಅನ್ನಪೂರ್ಣೆ ಉದ್ವಿಗ್ನಳಾದಳು. "ಮಗೂ ನರೇಂದ್ರ, ನೀನಿನ್ನು ಚಿಕ್ಕಮ್ಮನೆದುರಿಗೆ ಈ ನಟನೆ ಬಿಟನೆ ಎಲ್ಲ ಮಾಡಬಾರದು ತಿಳಿಯಿತೇ? ಅವಳು ಸಿಟ್ಟಿನವಳು. ಅವಳಿಗೆ ಅದೆಲ್ಲ ಸೇರುವದಿಲ್ಲ." ಅಂದಳು ಅನ್ನಪೂರ್ಣೆ.

ಆಶ್ಚರ್ಯಯುಕ್ತ ಧ್ವನಿಯಲ್ಲಿ ಎಲೋಕೇಶಿ ಕೇಳಿದಳು. "ಅರೇ! ಬಿಂದುವಿಗೆ ಇದೆಲ್ಲ ಸೇರುವದಿಲ್ಲವೇ? ಆದ್ದರಿಂದಲೇ ಹೀಗೆ ಎದ್ದು ಹೋದಳೇ?"

"ಇರಬಹುದು. ಮತ್ತೊಂದು ಮಾತು ಮಗು, ಏನು ನಿನ್ನ ಓದುಬರಹ, ಆಟಪಾಟ, ಊಟಗೀಟ ಎಲ್ಲ ವ್ಯವಸ್ಥಿತವಾಗಿ ಮಾಡಬೇಕು. ನಿನ್ನ ತಾಯಿಯ

ದುಃಖ ದೂರ ಮಾಡಬೇಕು. ತಿಳಿಯಿತೇ? ನೀನು ಅಮೂಲ್ಯನೊಂದಿಗೆ ಹೆಚ್ಚು ಕೊಡೆಬಾರದು. ಅವನು ಇನ್ನೂ ಚಿಕ್ಕವ. ಇರಲಿ" ಎಂದು ಉಪದೇಶಿಸಿದಳು.

ಈ ಉಪದೇಶ ಸ್ವತಃ ಎಲೋಕೇಶಿಗೆ ಸೇರಲಿಲ್ಲ. "ಚೆನ್ನಾಯಿತು! ನರೇಂದ್ರ ಬಡ ಹುಡುಗನೆಂದು ಕೊಂಡಿದ್ದೀರಿ-ಹು. ಬಡವನೇ ಸರಿ. ಅವನ ಹಾಗೇ ಉಳಿಯಬೇಕು ಇನ್ನು. ನಿನಗೊಂದು ಮಾತು ಹೇಳುತ್ತೇನೆ ಅತ್ತಿಗೆ, ಅಮೂಲ್ಯ ಚಿಕ್ಕವ ಹೌದು. ಆದರೆ ನರೇಂದ್ರನೇನು ದೊಡ್ಡವನೇ? ಕೇವಲ ಅರ್ಥ ವಲಪದ ದೊಡ್ಡವನಿಗೆ ದೊಡ್ಡವನೆಂದು ಕರೆಯುವದಿಲ್ಲ. ಇವನೇನೂ ದೊಡ್ಡ ಮನುಷ್ಯರನ್ನು ನೋಡಿಲ್ಲ, ಅವರೊಂದಿಗೆ ಕೂಡಿ ಮಾತಾಡಲಿಲ್ಲ, ಎಂದುಕೊಂಡೆಯಾ? ಇವನು ಮಾಡುವ ನಾಟಕ ನೋಡಲು ಸ್ವತಃ ರಾಜ ಮಹಾರಾಜರ ಮಕ್ಕಳು ನೆರೆಯುತ್ತಾರೆ!"

ಅನ್ನಪೂರ್ಣೆ ಅಪ್ರತಿಭಳಾದಳು. "ಹಾಗಲ್ಲ ಅಕ್ಕ; ತಪ್ಪು ತಿಳಕೊಳ್ಳಬೇಡ. ನಾನು ಹಾಗೆ ಹೇಳಲಿಲ್ಲ......ನಾನು ಬೇರೆ ಅರ್ಥದಲ್ಲಿ......"

"ಹೇಗೆ ಹೇಳಿದರೇನು? ಅತ್ತಿಗೆ, ನಾವೆಲ್ಲ ಮೂರ್ಖರನ್ನು-ಮೂರ್ಖರಿಗೆ ಅಷ್ಟು ತಿಳಿಯುವದಿಲ್ಲವೇ? ಅಣ್ಣ ಹೇಳಿದ್ದ, ನರೇಂದ್ರನಿಗೆ ಇಲ್ಲೇ ಇರಿಸು ಎಂದು. ಆದ್ದರಿಂದಲೇ ಕರೆಸಿ ಕಂಪೆ. ನಮಗೇನು ಅಲ್ಲಿ ದಿನಗಳೆಯಲು ಆಗು ತ್ತಿರಲಿಲ್ಲವೇ?

ಅನ್ನಪೂರ್ಣೆಗೆ ಮುಖ ಭಂಗವಾದಂತಾಯಿತು. ಏನು ಹೇಳಬೇಕೆಂದು ತಿಳಿಯದೇ ನುಡಿದಳು; "ನಾನು ಯಾವ ಅರ್ಥದಲ್ಲಿ ಹೇಳಿದೆನೆಂಬುದು ದೇವರಿಗೇ ಗೊತ್ತು. ತಾಯಿಯ ದುಃಖ ದೂರ ಮಾಡೆಂದಿಷ್ಟೇ ನಾನು ಹೇಳಿದ್ದು—"

"ಹಾಗಾದರೆ ಹಾಗೆ-ಹೋಗು. ನರೇಂದ್ರ, ಹೊರಗೆ ಹೋಗಿ ಕೂತುಕೋ. ದೊಡ್ಡ ಮನುಷ್ಯರ ಮಕ್ಕಳೊಂದಿಗೆ ಬೆರೆಯಬೇಡ." ಎಂದು ಹೇಳಿ ಸ್ವತಃ ತಾನೂ ಎದ್ದು ಹೊರಟಳು.

ಅನ್ನಪೂರ್ಣೆಯೂ ಅವಳ ಹಿಂದೆ ಎದ್ದಳು. ಸರಸರನೇ ಬಿಂದುವಾಸಿನಿಯ ಕೋಣೆಯನ್ನು ಹೊಕ್ಕು ಸಿಟ್ಟಿನಿಂದ ನುಡಿದಳು.

"ಏನೇ, ನಿನಗೇನು? ಸಂಬಂಧಗಿಂಬಂಧ ಎಲ್ಲವನ್ನೂ ನಿನಗಾಗಿ ಬಿಟ್ಟು ಬಿಡು ಎನ್ನುವಿಯಾ? ಯಾಕೆ ನೀನು ಅಲ್ಲಿಂದ ಎದ್ದು ಬಂದಿ? ಅದನ್ನಾದರೂ ಹೇಳು."

ಬಿಂದು ಅತ್ಯಂತ ಸ್ವಾಭಾವಿಕವಾದ ಸ್ವರದಲ್ಲಿ,

"ಯಾಕೆ ಸಂಬಂಧ ಕಳೆದುಕೊಳ್ಳುತ್ತೀರಿ ಅಕ್ಕ? ನೀವೆಲ್ಲ ಸುಖವಾಗಿ ಮನೆಯಲ್ಲಿರಿ–ನಾನು ಮಗುವನ್ನೆತ್ತಿಕೊಂಡು ಹೊರಗೆ ಹೋಗಬೇಕೆಂದಲ್ಲವೆ, ನಿಮ್ಮ ಮಾತಿನ ಅರ್ಥ? ಅಂದಳು.

"ಹೊರಗೆ! ಎಲ್ಲಿಗೆ ಹೋಗುವಿ?"

"ಹೋಗುವ ಮೊದಲು ವಿಳಾಸ ಕೊಡುತ್ತೇನೆ. ಈಗ ಅದರ ಬಗ್ಗೆ ವಿಚಾರಮಾಡಿ ತಲೆ ಕೆಡಿಸಿಕೊಳ್ಳಬೇಡಿ."

"ಹುಂ ತಿಳಿಯಿತು ಬಿಡು. ಜನಕ್ಕೆ ಮುಖ ತೋರಿಸದಂತೆ ಮಾಡದೇ ಬಿಡುವದಿಲ್ಲ ನೀನು. ಉಸ್! ಇವಳ ಕಾಲದಲ್ಲಿ ನಾನು ಸುಟ್ಟು ಬೂದಿಯಾದೆ." ಎನ್ನುತ್ತ ಹೊರಗೆ ಹೋಗುತ್ತಿದ್ದವಳು ಮಾಧವನನ್ನು ಕಂಡು ತಿರುಗಿಉರಿದೆದ್ದಳು. "ಲಾಲಾಜಿ, ನೀವೆಲ್ಲಿಯಾದರೂ ಹೋಗಿ ಇರಿ. ಇಲ್ಲದಿದ್ದರೆ ಬಿಂದುವನ್ನಾದರೂ ಕಳಿಸಿಕೊಡಿ. ನನ್ನಿಂದ ಇನ್ನು ಸಹಿಸಲಾಗುವದಿಲ್ಲ. ಇಂದು ನಿಮಗೆ ಎಲ್ಲ ಹೇಳಿ ಬಿಟ್ಟಿದ್ದೇನೆ."

ಮಾಧವ ಕಕ್ಕಾವಿಕ್ಕಿಯಾದ ಏನಾಯಿತೆಂದು ಹೆಂಡತಿಯನ್ನು ಕೇಳಿದ.

"ನನಗೆ ಗೊತ್ತಿಲ್ಲ. ಅಕ್ಕ–ಅಲ್ಲ ಯಜಮಾನಿ ಹೇಳಿದ್ದಾರೆ ನಾವು ಹೋಗಬೇಕೆಂದು. ಹೋಗಲೇಬೇಕು ತಿಳಿಯಿತೇ."

ಮಾಧವ ಏನೂ ಹೇಳದೇ ಮೇಜಿನ ಮೇಲಿದ್ದ ಪೇಪರನ್ನು ಎತ್ತಿಕೊಂಡು ಜಗುಲಿಯ ಪಕ್ಕದ ಕೋಣೆಗೆ ಹೊರಟುಹೋದನು.



ಎಲೋಕೇಶಿ ಕಾಣಲು ಭೋಳೆ ಸ್ವಭಾವದವಳಿದ್ದರೂ ನಿಜಕ್ಕೂ ಹಾಗಿರಲಿಲ್ಲ. ಬಿಂದುವಾಸಿನಿಯ ಬಳಿ ಸಾಕಷ್ಟು ಹಣವಿದೆಯೆಂದು ತಿಳಿದ ಕೂಡಲೇ ಅವಳು ತನ್ನ ಬೇಳೆ ಬೇಯಿಸಲು ಸಿದ್ಧಳಾದಳು. ಬಿಂದುವಿನ ಬಳಿ ಅವಳಿಗೆ ಬೇಕಾದ ಹಾಗೆ ಮಾತಾಡತೊಡಗಿದಳು. ಹಗಲಿರುಳು ಗಂಡನನ್ನು "ನಿಮ್ಮಿಂದಲೇ ನನ್ನ ಸರ್ವಸ್ವವೆಲ್ಲ ಹೋಯಿತು. ನಿಮ್ಮ ಬಳಿ ಇಷ್ಟುದಿನ ಕಳೆಯುವದಕ್ಕಿಂತ ಇಲ್ಲಿ ಬಂದು ಉಳಿದಿದ್ದರೆ ಇಷ್ಟೊತ್ತಿಗೆ ರಾಣಿಯಾಗುತ್ತಿದ್ದೆ. ಎಂದು ಪ್ರತಿದಿನ ರಾತ್ರಿ ಈ ಮಾನವ ರೂಪಿ ನಾಗಿಣಿ, ಗಂಡನನ್ನು ಹೀಯಾಳಿಸತೊಡಗಿದಳು. "ಮುತ್ತಿನಂತಹ ನನ್ನಮಗನನ್ನು ಬಿಟ್ಟು ಆ ಕರೀ ಗೊಂಬೆಯನ್ನು ಬೀದು ಪ್ರೀತಿಸುತ್ತಾಳಲ್ಲ?" ಎಂದು ನಿಶ್ವಾಸ ತೆಗೆದು ಹೇ ಭಗವಂತ! ಎನ್ನುತ್ತ ಮಲಗುತ್ತಿದ್ದಳು. ಪ್ರಿಯನಾಥನಿಗೂ ಹಿಂದಿನ ನೆನಪುಗಳು ಕಾಡುತ್ತಿದ್ದವು. ಹೀಗೆ ಅವರಿಬ್ಬರೂ ದಿನಗಳೆಯುತ್ತಿದ್ದರು. ಕ್ರಮೇಣ ಎಲೋಕೇಶಿಗೆ ಬಿಂದುವಾಸಿಯ ಮೇಲಿನ ಪ್ರೀತಿ ಮಮತೆಗಳು ಹೆಚ್ಚುತ್ತಿದ್ದವು.

ಇಂದು ಸಂಜೆ ಅವಳು ನುಡಿದಳು.

"ಬಿಂದು, ಎಂತಹ ಸೊಗಸಾದ ಕಪ್ಪುಕೂದಲಿವೆಯೇ ನಿನಗೆ. ಆದರೂ ಒಂದು ದಿನವೂ ಹೆಳಲು ಕಟ್ಟಿದ್ದನ್ನು ನಾನು ನೋಡಲಿಲ್ಲ. ಇವತ್ತು ಜಮೀಂದಾರರ ಮನೆಯುವರು ತಿರುಗಾಡಲು ಬರುವವರಿದ್ದಾರೆ. ನಾನು ಕಟ್ಟಲೇ?"

"ಬೇಡಮ್ಮಾ, ತಲೆಯ ಮೇಲೆ ಸೆರಗು ಹೊದಿಯಲು ಸಂಕೋಚವಾಗುತ್ತದೆ. ಹುಡುಗ ದೊಡ್ಡವನಾಗಿದ್ದಾನೆ ಕಂಡಿರಾ?"

ಎಲೋಕೇಶಿಗೆ ಆಶ್ಚರ್ಯವಾಯಿತು. "ಇದೆಂತಹ ಮಾತಮ್ಮಾ, ಹುಡುಗ ದೊಡ್ಡವನಾದರೆ ನೀನು ಹೆಳಲು ಹಾಕಬಾರದೇ? ನನ್ನ ನರೇಂದ್ರ ಅವನಿಗಿಂತ ಆರು ತಿಂಗಳಿಗೆ ದೊಡ್ಡವನಿದ್ದರೂ ನಾನು ಹೆಳಲು ಹಾಕುವದನ್ನು ಬಿಟ್ಟಿದ್ದೇನೆಯೇ?"

"ನೀವೇಕೆ ಬಿಡಬೇಕು? ನೀವು ಕೂದಲು ಕಟ್ಟಿದ್ದನ್ನು ನರೇಂದ್ರ ಅನೇಕ ಬಾರಿ ನೋಡಿದ್ದಾನೆ. ಆದರೆ ನನ್ನ ಮಗು ಇಂದು ಅಕಸ್ಮಾತ್ ನಾನು

ಕಟ್ಟಿದ್ದಷ್ಟು ಕಂಡರೆ.......ಅವನಿಗೆ ಆಶ್ಚರ್ಯವಾಗಬಹುದು. ಮತ್ತೆ ಗಲಭೆ-ಗಿಲಭೆ ಮಾಡಿದರೆ ಛೆ! ಛೆ! ಯಾರಿಗೆ ಗೊತ್ತು? ಅನಾವಶ್ಯಕ ಗೊಂದಲವಾಗ ಬಹುದಲ್ಲವೇ?"

ಕೆಲಸದಲ್ಲಿದ್ದ ಅನ್ನಪೂರ್ಣೆ ಸಹಸಾ ಇತ್ತ ಬಂದಳು.

"ಅರೇ! ನಿನ್ನ ಕಣ್ಣುಗಳು ಹೀಗೇಕೆ ಬಾಡಿವೆ? ಎಲ್ಲಿ? ಏನಾಗಿದೆ ನೋಡುವಾ!" ಎಂದಳು ಬಿಂದುವನ್ನು ದಿಟ್ಟಿಸುತ್ತ.

ಬಿಂದು ಲಜ್ಜಿತಳಾದಳು. "ದಿನಂಪ್ರತಿ ಅದೇನು ನೋಡುತ್ತೀರಿ ಅಕ್ಕ? ನಾನೇನು ಚಿಕ್ಕ ಮಗುವೇ? ಆರೋಗ್ಯ ಕೆಟ್ಟರೆ ನನಗೆ ತಿಳಿಯದಿರುತ್ತದೆಯೇ?"

"ಅಲ್ಲ ಮುದುಕಿ ನೀನು. ಬಾ ಇಲ್ಲಿ. ಬರುತ್ತಿಯೋ ಇಲ್ಲವೋ? ದಿನವಾನ ಒಳ್ಳೆಯದಲ್ಲ."

"ಖಂಡಿತವಾಗಿ ಬರುವದಿಲ್ಲ. ಸಂತೋಷದಿಂದಲೇ ಕಾಲಕಳೆಯುತ್ತಿದ್ದೇನೆ. ಮತ್ತೆ ಹತ್ತಿರ ಕರೆಯಬೇಡಿ."

"ನೋಡು. ಮುಚ್ಚಿಡಬೇಡ" ಎಂದು ಸಂದಿಗ್ಧ ದೃಷ್ಟಿಯಿಂದಲೇ ಅವಳನ್ನು ನಿರೀಕ್ಷಿಸುತ್ತ ಒಳಗಿನ ಕೋಣೆಗೆ ನಡೆದಳು ಅನ್ನಪೂರ್ಣೆ.

ಎಲೋಕೇಶಿ ಬಿಂದುವನ್ನು ಪರೀಕ್ಷಿಸಲು ಕೇಳಿದಳು:

"ಅತ್ತಿಗೆ ಶುಂಬಾ ದಯಾದ್ರ್ರ ಹೃದಯದವಳಲ್ಲವೇ?"

ಬಿಂದು ಒಂದು ಕ್ಷಣ ಮಾತಾಡಲಿಲ್ಲ. ಕೊನೆಗೆ ನುಡಿದಳು. "ಎಲ್ಲರನ್ನೂ ಅಕ್ಕನಂತೆಯೇ ಮಾಡಬಾರದೇ ದೇವರು?"

ಎಲೋಕೇಶಿ ಸುಮ್ಮನಾದಳು.

ಅನ್ನಪೂರ್ಣೆ ಕೈಯಲ್ಲಿ ಏನನ್ನೋ ಹಿಡಕೊಂಡು ಹಿಂದಿರುಗುತ್ತಿದ್ದಳು. ಬಿಂದು ಅವಳನ್ನು ಕೇಳಿದಳು.

"ಜಡೆ ಕಟ್ಟಿಕೊಳ್ಳುವಿರಾ? ಅಕ್ಕ?"

ಹೋಗುತ್ತಿದ್ದ ಅನ್ನಪೂರ್ಣೆ ನಿಂತು ಬಿಟ್ಟಳು. ಒಂದು ಕ್ಷಣ ಸುಮ್ಮನಿದ್ದು ನಡೆದುದೆಲ್ಲ ಊಹಿಸಿ ಎಲೋಕೇಶಿಯನ್ನು ಕುರಿತು ನುಡಿದಳು.

"ನಾನು ಬಹಳ ಸಲ ಹೇಳಿ ನೋಡಿದೆ. ಇವಳಿಗೆ ಹೇಳುವದು ಬಿಡುವದು ಒಂದೇ. ಇಷ್ಟು ಕೂದಲಿವೆ, ಕಟ್ಟುವದಿಲ್ಲ, ಇಷ್ಟು ಚಿನ್ನಾಭರಣಗಳಿವೆ, ಉಹುಂ, ಇದರ ಮಾತೇ ಇಲ್ಲ, ಚೆನ್ನಾದ ರೂಪವಿದೆ. ಆದರೆ ಒಂದು ಸಲವೂ

ಓರಣವಾಗಿದ್ದುದಿಲ್ಲ.... ಹುಡುಗನೂ ಹಾಗೇಯೇ ಆಗಿದ್ದಾನೆ. ಆದಿನ ಮಗು ನನಗೇನು ಕೇಳುತ್ತಿದ್ದ ಗೊತ್ತಿದೆಯೇ ಬಿಂದು? 'ಒಳ್ಳೇ ಬಟ್ಟೆಬರೆ ತೊಟ್ಟರೆ ಏನು ಸಿಗುವದಮ್ಮ? ಚಿಕ್ಕಮ್ಮನ ಹತ್ತಿರ ಎಷ್ಟೆಲ್ಲ ವಸ್ತ್ರಗಳಿವೆ, ತೊಟ್ಟುಕೊಳ್ಳುತ್ತಾರೆಯೇ ಅವರು?' ಎನ್ನುತ್ತಿದ್ದ."

ಬಿಂದುವಾಸಿನಿ ಹೆಮ್ಮೆಯಿಂದ ತಲೆಯೆತ್ತಿ ನಗುತ್ತ ನುಡಿದಳು:

—"ಅಕ್ಕಾ ಇಲ್ನೋಡಿ, ಮಗುವನ್ನು ಒಬ್ಬ ಸನ್ಯಸ್ಥನನ್ನಾಗಿ ಮಾಡಬೇಕಾದರೆ—ತಾಯಿಯಾದವಳು ಎಲ್ಲವನ್ನೂ ತ್ಯಜಿಸಬೇಕು. ಅಮೂಲ್ಯ ಒಬ್ಬ ದೊಡ್ಡ ಮನುಷ್ಯನಾದರೆ— ನಾಲ್ಕು ಜನರು ಆಗ ನನಗೇ ಬೆರಳು ಮಾಡಿ ತೋರಿಸಬಹುದು. 'ಇವಳೇ ಅಮೂಲ್ಯನ ತಾಯಿ ಎಂದು!" ಹೇಳುತ್ತ ಹೇಳುತ್ತ ಭಾವನಾವೇಗದಿಂದ ಆವಳ ಕಣ್ಣುಗಳು ತುಂಬಿಬಂದವು.

ಅನ್ನಪೂರ್ಣೆ ಮಮತೆಯಿಂದ ನುಡಿದಳು.

"ಆದ್ದರಿಂದಲೇ ಅಲ್ಲವೇ ನಾವು ಮಗುವಿಗೆ ಏನೂ ಹೇಳದೇ ಇರುವದು? ನಿನಗೇ ಒಪ್ಪಿಸಿಬಿಟ್ಟಿದ್ದೇನೆ—ಆದರೆ—ಇಷ್ಟೊಂದು ಆಶೆ ಇಟ್ಟುಕೊಂಡರೆ....."

"ಇದೊಂದೇ ಆಕಾಂಕ್ಷೆ ಅಕ್ಕ, ನನ್ನದು! ಅದೇ ನನ್ನ ಜೀವನಾಧಾರ ವಾಗಿದೆ!" ಸೆರಗಿನಿಂದ ಕಣ್ಣೊರಸಿಕೊಳ್ಳುತ್ತ, ಭಾವನಾಪರಳಾದ ಬಗ್ಗೆ ತನ್ನಲ್ಲಿ ತಾನೇ ಸಂಕೋಚಪಟ್ಟು ಒತ್ತಾಯದಿಂದ ನಕ್ಕಳು.

"ಇಲ್ಲ, ಅಕ್ಕ, ಆಶಾಭಂಗವಾದರೆ—ನಾನು ಬದುಕಲಿಕ್ಕಿಲ್ಲ!"

ಅನ್ನಪೂರ್ಣೆ ಮುಂದೆ ಮಾತಾಡಲಿಲ್ಲ— ಅವಳಿಗೆ ಬಿಂದುವಾಸಿನಿಯ ಮನೋಭಾವ ಗೊತ್ತಿಲ್ಲವೆಂದಲ್ಲ. ಆದರೆ ಈ ಆಶೆ-ಆಕಾಂಕ್ಷೆಗಳ ಉಗ್ರಪ್ರತಿಚ್ಛಾಯೆ ಕಂಡದ್ದು ಇವತ್ತೇ. ಬಿಂದು ಹಗಲು-ರಾತ್ರಿ ಅಮೂಲ್ಯನನ್ನು ಕಾಯುತ್ತಿರುವ ಗುಟ್ಟು ತಿಳಿಯಿತು. ತನ್ನ ಮಗನ ಅಭ್ಯುದಯಕ್ಕೋಸ್ಕರ ಜೀವ ಸವೆಸುತ್ತಿರುವ ಬಿಂದುವಾಸಿನಿಯ ಮುಖದ ಕಡೆಗೊಮ್ಮೆ ದಿಟ್ಟಿಸಿ ನೋಡಿದಳು. ಅನಿರ್ವಚನೀಯ ಶ್ರದ್ಧೆಯ ಝಳಕು ಅನ್ನಪೂರ್ಣೆಯ ಮೋರೆಯ ಮೇಲೆ ಹಾದು ಹೋಯಿತು. ಮಾತೃ ಹೃದಯ ತುಂಬಿ ಬಂದಿತು. ಕಣ್ಣೀರನ್ನು ತೋರಿಸಕೊಡದೆಂದು ಮತ್ತೊಂದು ಬದಿಗೆ ಮುಖ ತಿರುಗಿಸಿದಳು.

"ಹಾಗೆಯೇ ಆಗಲಿ, ಬಿಂದು. ಆದರೆ ನಿನ್ನ......" ಎನ್ನುತ್ತಿರುವ ಮಾತನ್ನು ಅರ್ಧಕ್ಕೆ ತೆಗೆದು ಬಿಂದು ನುಡಿದಳು

"ಅಹುದಮ್ಮ, ನನ್ನ ಅಕ್ಕನಿಗೆ ಇಂದು ಹೆಳಲು ಹಾಕಿದರಾಯಿತು. ನಾನು ಮನೆಗೆ ಬಂದಂದಿನಿಂದ ಹೆಳಲು ಹಾಕಿದುದನ್ನು ನಾ ಕಾಣೆ." ಎನ್ನುತ್ತ ಮುಗುಳುನಗೆ ನಕ್ಕು ಹೊರಗೆ ಹೊರಟು ಹೋದಳು.

೫-೬ ದಿನಗಳ ನಂತರದ ಮಾತು. ಆ ದಿನ ಬೆಳಿಗ್ಗೆ ಮನೆಯ ಹಳಬ ಕ್ಷೌರಿಕ ಯಾದವನ ಕ್ಷೌರ ಮಾಡಿ ಮಹಡಿಯ ಮೆಟ್ಟಲಿಳಿದು ಬರುತ್ತಿದ್ದ. ಅವನಿಗಾಗಿಯೇ ಕಾದು ನಿಂತಿದ್ದ ಅಮೂಲ್ಯ ಅವನನ್ನು ತಡೆದು ನಿಲ್ಲಿಸಿದ.

"ಕೈಲಾಸಣ್ಣ, ನನಗೆ ನರೇಂದ್ರನಂತೆ ಕೂದಲಿಡುವೆಯಾ?"

"ಯಾವರೀತಿ ಬಾಬು?"— ಅವನಿಗೆ ಆಶ್ಚರ್ಯವಾಗಿತ್ತು. ಅಮೂಲ್ಯ ತಲೆಯ ಮೇಲೆ ಕೈಯಾಡಿಸುತ್ತ ಆವೇಶದಿಂದ ಆತನಿಗೆ ವಿವರಿಸ ತೊಡಗಿದ.

"ನೋಡು ಇಲ್ಲಿ— ಈ ಬದಿಯಲ್ಲಿ ಉದ್ದವಿಡಬೇಕು. ಇಲ್ಲಿ ಸಣ್ಣ ಇಲ್ಲಿ ಮತ್ತೂ ಸಣ್ಣ— ಮತ್ತು ಕುತ್ತಿಗೆಯ ಹತ್ತಿರ ಸಣ್ಣದು ಮಾಡುತ್ತಾ ಬರಬೇಕು. ಮತ್ತೆ....."

"ಈ ರೀತಿ ಮಾಡಲು ನನ್ನಪ್ಪನಿಂದಲೂ ಆಗುವದಿಲ್ಲ." ಕೈಲಾಸಣ್ಣ ನಕ್ಕನು. ಅಮೂಲ್ಯ ಅಷ್ಟಕ್ಕೆ ಬಿಡುವವನೇ?

"ನೋಡು. ಒಂದು ಸಲ ಮಾಡಿ ನೋಡು. ಇದೇನು ಕಠಿಣವಲ್ಲಣ್ಣ"

ತಪ್ಪಿಸಿಕೊಳ್ಳುವ ಉಪಾಯ ಹುಡುಕುತ್ತ ಕೆಲಸಿಗ ನುಡಿದ.

"ಅರೆ! ಇವತ್ತು ಯಾವ ವಾರ? ನಿಮ್ಮ ಚಿಕ್ಕಮ್ಮ ಹೇಳಿದ ಹೊರತಾಗಿ ನಾನು ಹೇಗೆ ತೆಗೆಯಲಿ?"

"ಇಲ್ಲೇ ನಿಂತಿರು." ಎಂದು ಅಮೂಲ್ಯ ಗಡಿಬಿಡಿಯಿಂದ ಒಂದೇ ನೆಗೆತಕ್ಕೆ ನಾಲ್ಕು ಮೆಟ್ಟಲು ಹಾರಿದ. ಕೊನೆಗೇನು ತೋಚಿತೋ ಏನೋ, ತಿರುಗಿ ಧಡಧಡನೆ ಹತ್ತಿ ಕೆಲಸಿಗ ನಿಂತಲ್ಲಿ ಬಂದು ಆತನ ಕೊಡೆ ಕಸಿದುಕೊಂಡು ನಗುತ್ತ ಹೇಳಿದ.

"ಕೊಡೆ ನನ್ನ ಬಳಿ ಇರಲಿ. ಹೋಗುವಾಗ ಕೊಡುತ್ತೇನೆ" ಎನ್ನುತ್ತ ತಿರುಗಿ ಓಡಿದ.

ಚಿಕ್ಕಮ್ಮನ ಕೋಣೆಯ ಹೊರಗೆ ನಿಂತು ಕೂಗಿದ. "ಚಿಕ್ಕಮ್ಮಾ ಸ್ವಲ್ಪ ಹೊರಗೆ ಬನ್ನಿ"

ಚಿಕ್ಕಮ್ಮ ಅದೇ ಸ್ನಾನ ಮಾಡಿ ಪೂಜೆಗೆ ಕುಳಿತುಕೊಂಡಿದ್ದಳು. ಗಡಿಬಿಡಿಯಿಂದ ನುಡಿದಳು, "ಅರೆ! ಮುಟ್ಟಬೇಡಪ್ಪಾ! ಪೂಜೆ ಮಾಡುತ್ತಿದ್ದೇನೆ."

“ಪೂಜೆ ಬಳಿಕ ಮಾಡುವಿರಂತೆ, ಒಂದು ಬಾರಿ ಹೊರಗೆ ಬಂದು ಅಪ್ಪಣೆ ಕೊಡಿ. ಇಲ್ಲದಿದ್ದರೆ ಆತ ಕೂದಲು ತೆಗೆಯುವದಿಲ್ಲ.”

ಬಿಂದುವಿಗೆ ಬಹಳ ಆಶ್ಚರ್ಯವಾಯಿತು. ಪ್ರತಿಸಲ ಜೋಜೆತ ತಿಂದು ಕೂದಲು ತೆಗೆಸಿಕೊಳ್ಳಲು ಕುಳಿತುಕೊಳ್ಳುತ್ತಿದ್ದವ ಈಗೇಕೆ ಹೀಗನ್ನುತ್ತಿದ್ದಾನೆ? ಅವಳು ಹೊರಗೆ ಬಂದಳು. ಅವಳನ್ನು ಕಂಡು ಕೆಲಸಿಗ ಹೇಳಿದ.

“ಕಟ್ಟಪ್ಪಣೆ ಮಾಡಿದ್ದಾರಮ್ಮ. ನರೇಂದ್ರ ಬಾಬುವಿನಂತೆಯೇ ಕೂದಲು ಮಾಡಬೇಕಂತೆ.”

ಅಮೂಲ್ಯನಿಗೆ ತಡೆಯುವದಾಗಲಿಲ್ಲ. “ಸ್ವಲ್ಪ ನಿಲ್ಲು ನರೇಂದ್ರನನ್ನೇ ಕರೆದುಕೊಂಡು ಬರುವೆ.” ಒಂದೇ ಓಡಿದ. ಆತ ಮನೆಯಲ್ಲಿದ್ದಿಲ್ಲ. ಸ್ವಲ್ಪ ಹೊತ್ತು ಹುಡುಕಿ ನಿರಾಶನಾಗಿ ಬಂದ.

“ಎಲ್ಲೋ ಹೋಗಿದ್ದಾನೆ. ಹೂಂ ಇರಲಿ ಬಿಡು. ನೀವು ತೆಗೆಯುವಲ್ಲಿ ಚಿಕ್ಕಮ್ಮ, ನೀವು ಸಲ್ಪ ಹೊತ್ತು ನಿಂತು ಹೇಳಿರಿ. ಎಲ್ಲೆಲ್ಲಿ ಹೇಗೆ ಮಾಡಬೇಕೆಂದು.”

ಅವನ ಗದ್ದಲ ಕಂಡು ಬಿಂದುವಾಸಿನಿಗೆ ನಗು ಬಂದಿತು. “ಪೂಜೆಮಾಡುವದಿದೆಯಪ್ಪ” ಎಂದಳು.

“ಪೂಜೆ ಆ ಮೇಲೆ ಮಾಡುವಿರಂತೆ ಇಲ್ಲದಿದ್ದರೆ ಮುಟ್ಟಿಬಿಡುತ್ತೇನೆ” ಬಿಂದುವಿಗೆ ಬೇರೆ ಉಪಾಯ ತೋಚಲಿಲ್ಲ. ಅಲ್ಲಿ ನಿಂತಿರಲೇಬೇಕಾಯಿತು. ಕ್ಷೌರಿಕ ಕೂದಲು ಕತ್ತರಿಸತೊಡಗಿದ. ಬಿಂದುವಾಸಿನಿ ಅಮೂಲ್ಯನಿಗೆ ಕಾಣದಂತೆ ಅವನಿಗೆ ಸನ್ನೆ ಮಾಡಿದಳು. ಅವನು ಎಲ್ಲ ಕೂದಲನ್ನು ಒಂದೇ ರೀತಿ “ಕಟ್” ಮಾಡಿದ.

ಎಲ್ಲ ಮುಗಿದ ಬಳಿಕ ಅಮೂಲ್ಯ ತಲೆಯ ಮೇಲೆ ಕೈಯಾಡಿಸುತ್ತ ಸಂತೋಷದಿಂದ “ಸರಿ” ಎಂದು ನೆಗೆನೆಗೆದು ಹಾರಿ ಒಳಗೆ ಓಡಿದ. ಕೆಲಸಿಗ ಕೊಡೆಯನ್ನು ಬಗಲಲ್ಲಿ ಹಾಕಿ ನುಡಿದ. “ಅಮ್ಮ, ನಾಳೆ ಈ ಮನೆಯಲ್ಲಿ ಹೊಕ್ಕುವದು ಪ್ರಯಾಸದ ಕೆಲಸ.”

ಸ್ವಲ್ಪ ಹೊತ್ತಿನ ಮೇಲೆ ಬಿಂದುವಾಸಿನಿ ಅಡಿಗೆ ಮನೆಯಲ್ಲಿ ಹಾಲು ಕಾಯಿಸುತ್ತಿದ್ದಳು. ಅಮೂಲ್ಯ ಗದ್ದಲ ಮಾಡುತ್ತ ತನ್ನ ಚಿಕ್ಕಪ್ಪನ ಕೂದಲು ಬಾಚುವ “ಬ್ರಶ್” ಹುಡುಕುತ್ತಿರುವ ಸದ್ದು ಅವಳಿಗೆ ಕೇಳಿಸಿತು. ಮನಸ್ಸಿನಲ್ಲಿಯೇ ನಕ್ಕಳು. ಕೊಂಚಹೊತ್ತಿನಲ್ಲಿಯೇ ಅಮೂಲ್ಯ ರೋದಿಸುತ್ತಾ ಬಿಂದುವಾಸಿನಿಯ

ಬಳಿ ಬಂದ. "ಅಯ್ಯೋ! ಚಿಕ್ಕನ್ನು ಎಲ್ಲಾ ಹಾಳಾಗಿ ಹೋಯಿತು. ನಾಳೆ ಅವನನ್ನು ಕೊಂದೇ ಹಾಕುವೆ."

ಈಗ ಮಾತ್ರ ಆಕೆಗೆ ನಗು ತಡೆಯುವದಾಗಲಿಲ್ಲ. ಅಮೂಲ್ಯ ಸಿಟ್ಟಿನಿಂದ ಧೊಪ್ಪನೆ ಅವಳ ಬೆನ್ನಮೇಲೆ ಬಿದ್ದು ಅಳುತ್ತ ನುಡಿದ, "ನಿಮಗೇನು ಆಗ ಕಣ್ಣು ಕಾಣಿಸುತ್ತಿದ್ದಿಲ್ಲವೇ?"

ಆತನ ಅಳುವ ಧ್ವನಿ ಕೇಳಿ ಅನ್ನಪೂರ್ಣೆ ಅಡಿಗೆ ಮನೆಗೆ ಬಂದಳು. ನಡೆದ ಕತೆ ಕೇಳಿ ನುಡಿದಳು. "ಇದರಲ್ಲೇನಾಯಿತು? ನಾಳೆ ಸರಿಯಾಗಿ ಮಾಡಿದರಾಯಿತು."

"ಹುಂ! ನಾಳೆ ಹೇಗೆ ಸರಿಯಾಗುತ್ತದೆ? ಇಲ್ಲಿ ದೊಡ್ಡದಿಡು ಎಂದು ಹೇಳಿದರೆ ಸಣ್ಣ ಮಾಡಿದ್ದಾನೆ. ಈ ಬದಿಗಂತೂ ಕೂದಲೇ ಇಲ್ಲ!" ಅನ್ನಪೂರ್ಣೆ ಸಂತೈಸುವ ದನಿಯಲ್ಲಿ ಹೇಳಿದಳು, "ದೊಡ್ಡವಲ್ಲದಿದ್ದರೂ ಸಣ್ಣವಾದರೂ ಇವೆಯಲ್ಲ?"

"ಛೆ! ಅದೆಂಥಹ ಫ್ಯಾಶನ್ನು?" ಎಂದು ಗೋಳೋ ಎಂದು ಅತ್ತ. ಆ ದಿನ ಆತ ಸರಿಯಾಗಿ ಊಟ ಸಹ ಮಾಡಲಿಲ್ಲ.

ಅನ್ನಪೂರ್ಣೆ ಬಿಂದುವನ್ನು ಕೇಳಿದಳು.

"ಮಗುವಿಗೆ ಜುಟ್ಟು ಇಡಿಸುವ ಹವ್ಯಾಸ ನಿನಗೆ ಯಾವಾಗ ಹಿಡಿಯಿತು?"

ಬಿಂದು ನಕ್ಕಳು ಮಾತ್ರ. ಆದರೆ ಮರುಕ್ಷಣದಲ್ಲಿಯೇ ಗಂಭೀರಳಾಗಿ ನುಡಿದಳು. "ಅಕ್ಕ ಈ ಮಾತು ಸಾಮಾನ್ಯವಾದುದು. ಇವಕ್ಕಾಗಿ ನಗುತ್ತಿದ್ದೇನೆ ನಿಜ. ಆದರೆ ಹೆದರಿಕೆಯಿಂದ ಜೀವ ನಡುಗುತ್ತಿದೆ. ಕೆಲದಿನಗಳಿಂದ ಎಲ್ಲವೂ ಹೀಗೆಯೇ ನಡೆಯುತ್ತಿದೆ."

ಅನ್ನಪೂರ್ಣೆಗೂ ಮುಂದೆ ಮಾತಾಡಲಾಗಲಿಲ್ಲ.

* * * * *

ದುರ್ಗಾಪೂಜೆ ಬಂದಿತು. ಆ ಗಲ್ಲಿಯ .ಜಮೀನ್‌ದಾರರ ಮನೆಯಲ್ಲಿ ಆಮೋದ ಪ್ರಮೋದಗಳ ತಯಾರಿ ಸಾಕಷ್ಟು ನಡೆದಿತ್ತು. ಎರಡು ದಿನಗಳಿಂದಲೇ ನರೇಂದ್ರ ಅವುಗಳಲ್ಲಿ ಮಗ್ನನಾಗಿದ್ದ. ಸಪ್ತಮಿಯ ರಾತ್ರಿ ಅಮೂಲ್ಯ ಚಿಕ್ಕಮ್ಮನಿಗೆ ದುಂಬಾಲು ಬಿದ್ದ.

“ಚಿಕ್ಕಮ್ಮಾ, ಯಾತ್ರೆ† ನಡೆಯುತ್ತಲಿದೆ. ಹೋಗಲೇ?”

“ನಡೆಯುತ್ತಲಿದೆಯೇ? ಅದಿನ್ನಾ ನಡೆಯುವದಿದೆಯೋ?

“ನರೇಂದ್ರ ಹೇಳುತ್ತಿದ್ದ, ರಾತ್ರಿ ೨. ಗಂಟೆಗೆ ಪ್ರಾರಂಭವಾಗುವದಿದೆಯೆಂದು.”

“ಹುಂ. ಈಗಾಗಲೇ ಹೋಗಿ ಆ ಥಂಡಿಯಲ್ಲಿ ನಡುಗುತ್ತ ಕೂಡ್ರುವೆಯಾ? ಬೇಡ, ನಾಳೆ ಬೆಳಿಗ್ಗೆ ಹೋದರಾಯಿತು, ಚಿಕ್ಕಪ್ಪನೊಡನೆ.”

ಅಮೂಲ್ಯ ಅಳುವ ಮುಖ ಮಾಡಿದ.

“ಉಹೂಂ ಈಗಲೇ ಕಳಿಸಿಕೊಡಿ. ಚಿಕ್ಕಪ್ಪ ಹೋಗದಿದ್ದರೆ—”

“ಹುಂ. ಅಡ್ಡಿಯಿಲ್ಲ. ೩ ಘಂಟೆಗೆ ಅಲ್ಲವೇ? ಈಗ ಮಲಗು. ನಂತರ ಎಬ್ಬಿಸಿ ಆಳಿನೊಡನೆ ಕಳಿಸಿಕೊಡುತ್ತೇನೆ.”

ಅಮೂಲ್ಯನಿಗೆ ಸಿಟ್ಟುಬಂದು ಮಂಚದ ತುದಿಯಲ್ಲಿ ಮಲಗಿದ. ಬಿಂದು ಅವನನ್ನು ಎಳಕೊಳ್ಳಲು ಯತ್ನಿಸಿದಳು. ಅಮೂಲ್ಯ ಅವಳ ಕೈಯನ್ನು ಕೊಸರಿದ. ಕೆಲಹೊತ್ತು ಎಲ್ಲರೂ ನಿದ್ರಿಸಿದರು.

ಹೊರಗಿನ ಕೋಣೆಯ ಗಡಿಯಾರದ ಸದ್ದಿಗೆ ಅಮೂಲ್ಯ ತನ್ನ ಉದ್ವಿಗ್ನ ನಿದ್ರೆಯಿಂದ ಎಚ್ಚತ್ತ ಕಿವಿಗೊಟ್ಟು ಕೇಳಿದ. ಒಂದು.... ಎರಡು.... ಮೂರು.... ನಾಲ್ಕು....ಒಮ್ಮೆಲೇ ಗದ್ದಲ ಹಾಕುತ್ತ ಎದ್ದುನಿಂತ. ಬಿಂದುವಿನ ಕಿವಿಯ ಹತ್ತಿರ ಮೋರೆ ಒಯ್ದು ದೊಡ್ಡ ಧ್ವನಿಯಿಂದ ಕೂಗಿದ

“ಚಿಕ್ಕಮ್ಮಾ ನಾಲ್ಕು ಹೊಡೆಯಿತು.”

ಹೊರಗಿನ ಗಡಿಯಾರ ಬಡಿಯುತ್ತಲೇ ಇತ್ತು. ಐದು....ಆರು....ಏಳು.... ಎಂಟು....ಅಮೂಲ್ಯ ದೊಡ್ಡ ಧ್ವನಿ ತೆಗೆದು ಅತ್ತ. “ಅಯ್ಯೋ! ಎಂಟು ಘಂಟೆ ಆಗಿ ಹೋಯಿತಂ.”

....ಒಂಬತ್ತು—ಹತ್ತು....ಹನ್ನೊಂದು....ಹನ್ನೆರಡು. ಹನ್ನೆರಡು ಹೊಡೆಯಿತು. ತಿರುಗಿ ನಿಶ್ಶಬ್ದ....ಗಡಿಯಾರದ ಟಿಕ್ ಟಿಕ್ ಶಬ್ದ ಮಾತ್ರ ಕೇಳಿಸುತ್ತಿತ್ತು. ಅಮೂಲ್ಯನಿಗೆ ತನ್ನ ತಪ್ಪು ತಿಳಿದು ನಾಚಿಕೆಯಾಯಿತು

ಈ ಸದ್ದಿಗೆ ಕೋಣೆಯ ಇನ್ನೊಂದು ಬದಿಗೆ ಮಲಗಿದ್ದ ಮಾಧವ ಎಚ್ಚರಗೊಂಡ [illegible] “ [illegible] ” ಎಂದ.

---

† [illegible]

"ಬಿಂದುವಾಸಿನಿಗೂ ನಗು ಬಂದಿತು. ಅವನು ಈಗಲೇ ಎದ್ದರೀತಿ ನೋಡಿದಿರಾ? ಮನೆಗೆ ಬೆಂಕಿ ಬಿದ್ದರೂ ಹೀಗೆ ಏಳುತ್ತಿರಲಿಲ್ಲ."

ಕೊನೆಗೆ ಅಮೂಲ್ಯ ಸ್ತಬ್ಧನಾಗಿ ಮಲಗಿದ್ದನ್ನು ಕಂಡು ಬಿಂದುವಿಗೆ ದಯೆ ಬಂದಿತು. ಅವನನ್ನೆಬ್ಬಿಸಿದಳು. "ಹುಂ. ಏಳು. ಆದರೆ ಯಾರೊಡನೆಯೂ ಜಗಳಾಡಬೇಡ ತಿಳಿಯಿತೇ?"

ಭೈರುವಿನ ಜೊತೆಯಲ್ಲಿ ಕಂದೀಲು ಕೊಟ್ಟು ಅವನನ್ನು ಕಳುಹಿಸಲಾಯಿತು.

ಮಾರುದಿನ ಬೆಳಿಗ್ಗೆ ಹತ್ತುಘಂಟೆಗೆ ಅಮೂಲ್ಯ ಸಂತೋಷದಿಂದ ಮನೆಗೆ ಮರಳಿದ. ಬಿಂದು ಕೇಳಿದಳು. "ಹೇಗಿತ್ತು? ಚೆನ್ನಾಗಿತ್ತೇ?"

"ಹಾ! ಹಾ! ಎಷ್ಟು ಚೆನ್ನಾಗಿತ್ತು ಎನ್ನುತ್ತೀರಿ ಚಿಕ್ಕಮ್ಮಾ. ಚಿಕ್ಕಪ್ಪಾ, ಇವತ್ತು ರಾತ್ರಿ ನೃತ್ಯಗಳಾಗುತ್ತಿವೆಯಂತೆ. ಇಬ್ಬರು ಬಂದಿದ್ದಾರೆ. ನರೇಂದ್ರ ಅವರನ್ನು ನೋಡಿ ಬಂದಿದ್ದಾನೆ. ನೋಡಲು ಚಿಕ್ಕಮ್ಮನಂತಿದ್ದಾರೆ.— ಬಹಳ ಚೆನ್ನಾಗಿದ್ದಾರೆ, ಅಪ್ಪನಿಗೂ ಹೇಳಿದ್ದೇನೆ...."

"ಒಳ್ಳೆಯ ಕೆಲಸ ಮಾಡಿದೆ." ಚಪ್ಪಾಳೆ ಬಡಿದು ನಕ್ಕ ಮಾಧವ. ಸಿಟ್ಟಿನಿಂದ ಬಿಂದು ಉರಿಯತೊಡಗಿದಳು.

"ನಿಮ್ಮ ಗುಣಾಢ್ಯ ಅಮೂಲ್ಯನ ಮಾತು ಕೇಳಿದಿರಾ?" ಎನ್ನುತ್ತ ಅಮೂಲ್ಯನೆಡೆಗೆ ತಿರುಗಿ, "ನೋಡು, ನೀನೆಲ್ಲಿಯೂ ಹೋಗಕೂಡದು---ಎಲ್ಲ ಹರಾಮೀ ಜನ,.......... ..... ನನ್ನಂತೆ ಇದ್ದಾರೆಂದು ಯಾರು ಹೇಳಿದರು ನಿನಗೆ? ನರೇಂದ್ರನೆ?" ಅಮೂಲ್ಯ ಹೆದರುತ್ತ ನುಡಿದ.

"ಆತ ನೋಡಿಕೊಂಡು ಬಂದಿದ್ದಾನೆ."

"ಹುಂ-ಬರಲಿ ಆತ." ಎಂದು ಭುಸುಗುಟ್ಟುತ್ತ ಒಳಗೆ ನಡೆದಳು.

ಸಂಜೆಯಾಗುತ್ತಲೇ ಅಮೂಲ್ಯ ಅನ್ನಪೂರ್ಣೆಯ ಹಿಂದೆ ತಿರುಗಾಡತೊಡಗಿಡ.

"ಅಮ್ಮಾ, ನೃತ್ಯ-ಗಾಯನ ನೋಡಲು ಹೋಗುತ್ತೇನೆ. ಬೇಗ ಬರುವೆ" ಕೆಲಸದಲ್ಲಿದ್ದ ಅನ್ನಪೂರ್ಣೆ, "ಚಿಕ್ಕಮ್ಮನಿಗೆ ಹೇಳಿ, ಹೋಗು" ಎಂದಳು. ಅಮೂಲ್ಯ ಹಠಮಾಡಿದ.

"ಇಲ್ಲಪ್ಪಾ, ನನಗೆ ಗೊತ್ತಿಲ್ಲ, ಆ ಮೇಲೆ ಸಿಟ್ಟು ಬರಬಹುದು ಆಕೆಗೆ. ನೀನೇ ಹೋಗಿ ಅವಳಿಗೆ ಕೇಳು."

ಅಮೂಲ್ಯ ಅಳುತ್ತ ಅಮ್ಮನ ಸೆರಗು ಹಿಡಿದು ಎಳೆಯುತ್ತ ನುಡಿದ.

"ನೀವೇ ಹೇಳಿ. ನಾನು ನರೇಂದ್ರನೊಂದಿಗೆ ಹೋಗುತ್ತೇನೆ."

"ಹುಂ-ಆದರೆ........"

ಮಾತು ಪೂರ್ಣವಾಗುವ ಮೊದಲೇ ಅಮೂಲ್ಯ ಒಂದೇ ನೆಗೆತ ಹಾರಿ ಓಡಿ ಹೋದ.

ಒಂದು ತಾಸಿನ ನಂತರ ಬಿಂದು ಅಮೂಲ್ಯನನ್ನು ಹುಡುಕುತ್ತಿದ್ದುದನ್ನು ಅನ್ನಪೂರ್ಣೆ ಕೇಳಿದಳು-ಆದರೂ ಸುಮ್ಮನಿದ್ದಳು. ಹುಡುಕುವಿಕೆ ಕ್ರಮಶಃ ಹೆಚ್ಚಾದ ಮೇಲೆ ಅನ್ನಪೂರ್ಣೆ ಹೊರಗೆ ಬಂದು ಹೇಳಿದಳು.

"ಎಲ್ಲಿಯೋ ನೃತ್ಯ ನಡೆಯುತ್ತಿದೆ-ನರೇಂದ್ರನೊಂದಿಗೆ ಹೋಗಿದ್ದಾನೆ-ಬೇಗಬರಬಹುದು."

ಬಿಂದುವಾಸಿನಿ ಸಮೀಪಕ್ಕೆ ಬಂದು ಕೇಳಿದಳು—

"ಆತನಿಗೆ ಹೋಗು ಎಂದು ಯಾರು ಹೇಳಿದರು?"

ಹೆದರಿಕೆಯಿಂದ ಅನ್ನಪೂರ್ಣೆ ತಾನು ಎಂದು ಒಪ್ಪಿಕೊಳ್ಳಲಿಲ್ಲ-ಯಾರಿಗೂ ಹೇಳದೇ ಹೋಗಿದ್ದಾನೆಂದು ಹೇಳಲು ಕೂಡ ಹಿಂದೆ ಮುಂದೆ ನೋಡಲಿಲ್ಲ.

ಬಿಂದುವಿನ ಮುಖ ಸಪ್ಪಗಾಯಿತು. ಸ್ವಲ್ಪ ಹೊತ್ತಿನ ಮೇಲೆ ಬಂದ ಅಮೂಲ್ಯನಿಗೆ ಚಿಕ್ಕಮ್ಮ ತನಗೆ ಕರೆಯುತ್ತಿದ್ದ ಧ್ವನಿ ಕೇಳಿಸಿತು. ಸದ್ದುಮಾಡದೇ ಮಹಡಿ ಹತ್ತಿ ತನ್ನ ತಂದೆಯ ಕೋಣೆಗೆ ಹೋಗಿ ಮಂಚದ ಮೇಲೆ ಮಲಗಿದ.

ಕನ್ನಡಕ ಏರಿಸಿ ದೀಪದ ಬೆಳಕಿನಲ್ಲಿ ಭಾಗವತ ಓದುತ್ತಿದ್ದ ಯಾದವ ತಲೆ ಎತ್ತಿ ಕೇಳಿದ.

"ಯಾರು? ಮಗುವೆ?"

ಮಗು ಉತ್ತರಿಸಲಿಲ್ಲ.

ಇಷ್ಟರಲ್ಲಿ ಕೆಲಸದವಳು ಬಂದು ಹೇಳಿದಳು.

"ಚಿಕ್ಕಮ್ಮ ಕರೆಯುತ್ತಿದ್ದಾರೆ ಬನ್ನಿ"

ಅಮೂಲ್ಯ ತಂದೆಗೆ ಹೇಳಿದ, "ಅಪ್ಪಾ, ನನಗೆ ಸ್ವಲ್ಪ ಕೆಳಗೆ ಬಂದು ಬಿಟ್ಟು ಕೊಟ್ಟು ಬರುವಿರಾ?"

ಯಾದವ ಆಶ್ಚರ್ಯಾನ್ವಿತ ಧ್ವನಿಯಲ್ಲಿ ಕೇಳಿದ "ನಾನೇ? ಏನಾಯಿತು?"

ಕೆಲಸದವಳು ನಡೆದ ಘಟನೆಯನ್ನು ವಿವರಿಸಿದಳು-ಇದರ ಬಗ್ಗೆ ಜಗಳ

ವಾಗುವದು ನಿಶ್ಚಿತವೆಂದು ಯಾದವನಿಗೆ ಖಚಿತವಾಯಿತು. ಅವನು ಎದ್ದು ಅನೂಲ್ಯನನ್ನು ಜೊತೆಗೆ ಕರಕೊಂಡು ಬಿಂದುವಿನ ಕೋಣೆಯ ಹೊರಬದಿಗೆ ನಿಂತು ಹೇಳಿದ.

"ಈ ಬಾರಿ ಕ್ಷಮಿಸಿ ಬಿಡು–ಇನ್ನು ಮುಂದೆ ಹೀಗೆ ಮಾಡುವದಿಲ್ಲವೆಂದು ಅವನೇ ಹೇಳಿದ್ದಾನೆ."

ಅದೇ ದಿನ ರಾತ್ರಿ ಊಟಕ್ಕೆ ಕುಳಿತಾಗ ಬಿಂದುವಾಸಿನಿ ನುಡಿದಳು,

"ನಿಮ್ಮ ಮೇಲೆ ನನಗೆ ಸಿಟ್ಟಿಲ್ಲ ಅಕ್ಕ, ಆದರೆ ನನಗೆ ಇಲ್ಲಿ ಇರುವ ಮನಸ್ಸಿಲ್ಲ–ನಾನು ಬೇಡವೆಂದರೂ ಹೋಗುವ ದುಃಸಾಹಸ ಹೇಗೆ ಆತ ಮಾಡಿದ?–ಇಲ್ಲ ಅಕ್ಕ, ನಾನು ಕಲಕತ್ತೆಯಲ್ಲಿ ಬಾಡಿಗೆ ಮನೆಯಲ್ಲಿ ಉಳಿಯುವದೇ ಲೇಸು."

ಅನ್ನಪೂರ್ಣೆ ಉದ್ವಿಗ್ನಳಾದಳು.

"ನೀವೆಲ್ಲ ಹೋದಬಳಿಕ ನಾನಿಲ್ಲಿದ್ದೇನು ಉಪಯೋಗ—?" ಮಧ್ಯ-ದಲ್ಲಿಯೇ ಅನ್ನಪೂರ್ಣೆಯ ಮಾತು ತಡೆದು ಬಿಂದುವಾಸಿನಿ ಹೇಳಿದಳು.

"ನಾನು ಯಾಕೆ ಈ ರೀತಿ ಹೇಳುತ್ತಿದ್ದೇನೆಂದು ನಿಮಗೆ ಗೊತ್ತಿದೆ.......ಬಹಳ ಕೆಟ್ಟ ಹುಡುಗ ಈ ನರೇಂದ್ರ.........."

"ಆಂ? ಏನು? ನರೇಂದ್ರನೇನು ಮಾಡಿದ? ಹುಂ....ಅವರಿಬ್ಬರೂ ಒಂದು ವೇಳೆ ಅಣ್ಣತಮ್ಮಂದಿರಿದ್ದರೇನು ಮಾಡುತ್ತಿದ್ದೆ?"

"ಹಾಗಿದ್ದರೆ, ಹಂ! ಇವತ್ತು ಅವನನ್ನು ಕಟ್ಟಿಹಾಕಿಸಿ ಬಾರಕೋಲಿನೇಟು ಹೊಡೆಸುತ್ತಿದ್ದೆ, ತಿಳಿಯಿತೇ— ಇದರ ಹೊರತು ಹಾಗೆ-ಹೀಗೆ ಅನ್ನುತ್ತ ಕುಳಿತರೆ ಕೆಲಸವಾಗುವದೇ?.......ಅಕ್ಕ, ನೀವು ಆ ಜನರನ್ನು ಕಳಿಸಿಕೊಡಬಾರದೇ?"

ಮನಸ್ಸಿನಲ್ಲೇ ಅನ್ನಪೂರ್ಣೆ ಅಸಮಾಧಾನಗೊಂಡಳು.

"ಕಳಿಸುವದು–ಇರಿಸುವದು ನನ್ನ ಕೈಯಲ್ಲಿದೆಯೇ ? ಯಾರು ಕರೆಸಿ ಕೊಂಡಿದ್ದಾರೋ ಅವರಿಗೇ ಹೇಳು—"

"ಇವೆಲ್ಲ ಸಂಗತಿಗಳನ್ನು ಹೇಗೆ ಹೇಳಲಿ?"

"ಉಳಿದ ಮಾತುಗಳನ್ನು ಹೇಗೆ ಹೇಳುತ್ತೀ, ಹಾಗೆಯೇ ?"

ಬಿಂದುವಾಸಿನಿ ಕೊಂಚ ಸಿಟ್ಟಿನಲ್ಲಿ ನುಡಿದಳು,

"ನನಗೆ ಏನೂ ತಿಳಿಯುವದಿಲ್ಲವೆಂದು ಮಾಡಿದ್ದೀರಾ? ಮನೆಯ ನೌಕರರ ಮಾತಲ್ಲ ಇದು; ಸಂಬಂಧಿಕರ ಮಾತು. ನಾನು ಹೇಳಿದರೆ ಸಿಟ್ಟಾಗಲಿಕ್ಕಿಲ್ಲವೆ?"

"ಆಗದೇ ಏನು? ಸಾಯುವ ತನಕ ನನ್ನ-ನಿನ್ನ ಮೋರೆ ನೋಡ ಲಿಕ್ಕಿಲ್ಲ. ಎಷ್ಟೆಂದರೂ ನಾನು-ನೀನು ಹೊರಗಿನವರು, ನೋಡು, ಅವರು ಅಣ್ಣ-ತಂಗಿ—ಈ ಬಗ್ಗೆ ನೀನೇಕೆ ಯೋಚಿಸುತ್ತಿಲ್ಲ? ನಾನಂತೂ ಮುದುಕಿಯಾದೆ, ಇಷ್ಟು ಸಣ್ಣ ಮಾತನ್ನು ದೀರ್ಘಕ್ಕೆಳೆದರೆ ಜನ ನಮ್ಮನ್ನು ಮೂರ್ಖರೆನ್ನ ಲಾರರೇ?"

ಬಿಂದುವಾಸಿನಿಯ ಸಿಟ್ಟು ಮತ್ತೇ ಏರಿತು.

"ಹುಂ. ಊಟಮಾಡು. ಸುಮ್ಮನೆ ಏಕೆ ಕುಳಿತಿದ್ದಿ?" ನುಡಿದಳು ಅನ್ನಪೂರ್ಣೆ.

"ಊಟ ಮುಗಿಯಿತು." ಸಿಟ್ಟಸಿರೊಂದಿಗೆ ಹೇಳಿದಳು ಬಿಂದು.

ಊಟಮಾಡಿ ಮಲಗಲು ಹೋದ ಬಿಂದುವಾಸಿನಿ ತನ್ನ ಹಾಸಿಗೆಯಲ್ಲಿ ಅಮೂಲ್ಯನನ್ನು ಕಾಣದೇ ತಿರುಗಿ ಬಂದು ಅನ್ನಪೂರ್ಣೆಗೆ ಕೇಳಿದಳು.

"ಬಹುಶಃ ನನ್ನ ಹಾಸಿಗೆಯ ಮೇಲೆ ಬಂದು ಮಲಗಿರಬೇಕು. ಎಬ್ಬಿಸಿ ಕೊಂಡು ಹೋಗು ಅವನನ್ನು." ಕೆಲಸದಲ್ಲಿದ್ದ ಅನ್ನಪೂರ್ಣೆ ಹೇಳಿದಳು.

"ಬೇಡ; ಬೇಡ; ಇರಲಿ" ಪೆಚ್ಚಾಗಿ ನುಡಿದು ಬಿಂದು ಕೊಂಚ ಅವಸರ ದಲ್ಲಿಯೇ ಅಲ್ಲಿಂದ ಹೊರಗೆ ಹೋದಳು.

ಮಧ್ಯರಾತ್ರಿಯ ಹೊತ್ತಿಗೆ ಕೋಣೆಯ ಹೊರಗೆ ಅನ್ನಪೂರ್ಣೆ ಕೂಗುತ್ತಿದ್ದು ದರಿಂದ ಬಿಂದು ಎಚ್ಚರವಾದಳು.

"ಏನಕ್ಕ?"

"ಸ್ವಲ್ಪ ಕದ ತೆರೆ. ನಿನ್ನ ಮಗನನ್ನು ನೀನೇ ಸಂಭಾಳಿಸಮ್ಮಾ, ನನ್ನಪ್ಪ ಕೂಡ ಇಷ್ಟು ತೊಂದರೆ ಕೊಟ್ಟರೆ ನಾನು ಸಹಿಸಲಾರೆ."

ಬಿಂದು ಕದ ತೆರೆಯುತ್ತಲೇ ಅಮೂಲ್ಯನನ್ನು ಹೊತ್ತುಕೊಂಡ ಅನ್ನ ಪೂರ್ಣೆ ಒಳಗೆ ನುಗ್ಗಿದಳು.

"ಉಸ್ಸಪ್ಪಾ! ಇಂಥ ಹುಡುಗನನ್ನು ನಾನೆಲ್ಲಿಯೂ ನೋಡಿಲ್ಲಮ್ಮ. ಏನು ಹಟಮಾರಿ! ಅಬ್ಬ! ಒಂದು ನಿಮಿಷ ಎವೆ ಮುಚ್ಚಲು ಕೂಡ ಕೊಡಲಿಲ್ಲ. ಒಂದು ಕ್ಷಣ 'ನೀರು ಕೊಡು' ಎಂದರೆ ಮತ್ತೊಮ್ಮೆ 'ಗಾಳಿ ಹಾಕು' ಎನ್ನುತ್ತಾನೆ. ಇಡೀ ದಿನ ಕೆಲಸ ನನಗೆ. ರಾತ್ರಿ ನಿದ್ದೆಗೆಟ್ಟರೆ ಆಗುವದಿಲ್ಲ—ನಿನಗೇ ತಕ್ಕಮರಿ ಇದು. ಉಸ್!..."

ನಗುತ್ತ ಬಿಂದುವಾಸಿನಿ ಅಮೂಲ್ಯನನ್ನು ಹಾಸಿಗೆಯ ಮೇಲೆ ಮಲಗಿಸಿದಳು. ಮತ್ತೊಂದೆಡೆ ಮಲಗಿದ್ದ ಮಾಧವ ಮುಸುಕಿನಲ್ಲಿಯೇ ನಕ್ಕು ಕೇಳಿದ.

"ಈಗ ಆರಾಮಾಯಿತೇ ಅತ್ತಿಗೆ?"

"ಇಂದು ಚಿಕ್ಕಮ್ಮನ ಹೆದರಿಕೆಯಿಂದ ನನ್ನ ಹಾಸಿಗೆಯ ಮೇಲೆ ಒಂದು ಮಲಗಿದ್ದ ನಿಜ. ಆದರೆ ಹಾಂ...." ಎನ್ನುತ್ತ ಅನ್ನಪೂರ್ಣೆ ನಗತೊಡಗಿದಳು.

"ಏನಾಯಿತಕ್ಕಾ?" ಸಂದರ್ಭ ತಿಳಿಯದ ಬಿಂದು ತಾನು ಕೂಡ ನಗುತ್ತ ಕೇಳಿದಳು.

"ಏನು ಹೇಳಿದ ಗೊತ್ತೇ ಬಿಂದೂ?—'ನಿನ್ನ ಹತ್ತರ ಮಲಗಲು ನಾಚಿಕೆ ನನಗೆ'—ಎನ್ನಬೇಕೆ ಅವನು?"

ಮೂವರು ಬಿದ್ದು ಬಿದ್ದು ನಕ್ಕರು.

"ಹುಂ. ಮಲಗಿ ಇನ್ನು" ಎಂದು ಆಕಳಿಸಿ ಅನ್ನಪೂರ್ಣೆ ತನ್ನ ಕೋಣೆಯ ಕಡೆಗೆ ಹೊರಟಳು. ಅರೆನಿದ್ದೆಯಲ್ಲಿದ್ದ ಅಮೂಲ್ಯ ಕೂಡ ಮುಗುಳು ನಗುತ್ತಿದ್ದ.

* * * * *

ಹತ್ತಾರು ದಿನಗಳ ನಂತರದ ಮಾತಿದು. ತೀರ್ಥಯಾತ್ರೆಯ ಮೊದಲು ಮಗಳನ್ನು ಒಂದು ಸಲ ನೋಡಬೇಕೆಂದು ಕೊಂಡು ಬಿಂದುವಾಸಿನಿಯ ತಾಯಿ–ತಂದೆಗಳು ಅವಳಿಗಾಗಿ ಒಂದು ಪಲ್ಲಕ್ಕಿಯನ್ನು ಕಳಿಸಿದರು. ಬಿಂದು ಅಕ್ಕನ ಅಪ್ಪಣೆ ಪಡೆದು ಅಮೂಲ್ಯನಿಗೂ ಕೂಡ ಕಾಣಿಸಿಕೊಳ್ಳದಂತೆ ತವರು ಮನೆಗೆ ಹೋಗುವ ತಯಾರಿ ನಡೆಸಿದ್ದಳು. ಇಷ್ಟರಲ್ಲಿ ಕಂಕುಳಲ್ಲಿ ಪುಸ್ತಕ ತುರುಕಿಕೊಂಡು ಅಮೂಲ್ಯ ಚಿಕ್ಕಮ್ಮನಿದ್ದಲ್ಲಿ ಬಂದ. ಒಂದೆರಡು ತಾಸಿನ ಹಿಂದೆ ಆತ ರಸ್ತೆಯ ಮುರುವಿನಲ್ಲಿ ಪಲ್ಲಕ್ಕಿಯನ್ನು ಕಂಡಿದ್ದ. ಈಗ ಶೃಂಗಾರದಲ್ಲಿ ತೊಡಗಿದ್ದ ಚಿಕ್ಕಮ್ಮನನ್ನು ಕಂಡು ಆತನಿಗೆ ಸಂಶಯ ಉಂಟಾಯಿತು. ಆಶ್ಚರ್ಯವೂ ಆಯಿತು.

"ಚಿಕ್ಕಮ್ಮ, ಇಂದೇನು?" ಎಂದು ಕೇಳಿದ.

ಅಲ್ಲಿದ್ದ ಅನ್ನಪೂರ್ಣೆಗೆ ಸಂದರ್ಭ ಸ್ಪಷ್ಟವಾಯಿತು. ಆಂತೆಯೇ ಬಿಂದು ಹೋದನಂತರದ ಸನ್ನಿವೇಶವನ್ನು ಕಲ್ಪಿಸಿ ನಗು ಒಂದಿತವಳಿಗೆ. ತಡೆದು ಕೊಳ್ಳಲು ಮುಖದ ಮೇಲೆ ಸೆರಗು ಸರಿಸಿ ಹೊರಗೆ ಹೋದಳು. ಬಿಂದುವಾಸಿನಿ ಮುಗುಳು ನಗೂ ನಗುತ್ತ ನುಡಿದಳು.

"ಯಾವಾಗ ನಿನ್ನ ಹೆಂಡತಿ ಬರುತ್ತಾಳೋ, ಆಭರಣ ಧರಿಸುತ್ತಾಳೋ ಎಂದು ದಾರಿ ಕಾದು—ಇಂದು ಬೇಸರದಿಂದ ನಾನು ಧರಿಸಿವೆ. ಹುಂ. ಇರಲಿ, ಶಾಲೆಗೆ ಹೋಗು."

ಅಮೂಲ್ಯ ಕೊನೆಯ ಮಾತಿಗೆ ಲಕ್ಷ್ಯ ಕೊಡಲಿಲ್ಲ. ಸಂಶಯದಿಂದ ನುಡಿದ. "ಅಮ್ಮ ಇಷ್ಟೇಕೆ ನಗುತ್ತಿದ್ದಾರೆ?....ನಿಮ್ಮ ಪ್ರಯಾಣ ಎಲ್ಲಿಗೆ?"

ಬಿಂದು ಉಕ್ಕೇರಿ ಬಂದ ನಗುವನ್ನು ಬಲವಂತವಾಗಿ ತಡೆದುಕೊಂಡು ಗಂಭೀರ ಧ್ವನಿಯಿಂದ ನುಡಿದಳು.

"ಹೋಗುವದೆಲ್ಲಿಗೆ? ಹೋಗುವದಿದ್ದರೂ ಕೂಡ ಅದಕ್ಕೆ ನಿನ್ನ ಅಪ್ಪಣೆ ಬೇಕೆ?—ಹುಂ ಎಲ್ಲಿಯೂ ಹೋಗುವದಿಲ್ಲ. ಶಾಲೆಗೆ ನಡೆ, ನಡೆ, ಹೊತ್ತಾಯಿತು."

"ಹುಂ ಹೋಗುತ್ತೇನೆ." ಎಂದು ಹೊರಟ ಅಮೂಲ್ಯ.

ಅನ್ನಪೂರ್ಣೆ ಕೊಠಡಿಯಲ್ಲಿ ಬಂದು ಹೇಳಿದಳು.

"ಇಷ್ಟು ಸುಲಭವಾಗಿ ಹೋಗಬಹುದೆಂದು ನಾನು ಎಣಿಸಿರಲಿಲ್ಲ. ಆದರೆ ಶಾಲೆಯಿಂದ ಬಂದಕೂಡಲೇ ನಿನ್ನನ್ನು ಕಾಣದೇ ಬಹಳ ಗೊಂದಲ ಹಾಕಬಹುದು."

"ಶಾಲೆಗೆ ಹೋದ ಎಂದುಕೊಂಡಿರಾ? ಛೇ! ಅವನು ಇಲ್ಲೆಲ್ಲೋ ಅಡಗಿಕೊಂಡಿದ್ದಾನೆ. ಸರಿಯಾದ ಹೊತ್ತಿಗೆ ಪ್ರತ್ಯಕ್ಷನಾಗುವ. ನೋಡಿ ಬೇಕಾದರೆ!"

ಅವಳಂದಂತೆಯೇ ಆಯಿತು. ಬಿಂದು ಅನ್ನಪೂರ್ಣೆಯ ಕಾಲುಮುಟ್ಟಿ ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುವಷ್ಟರಲ್ಲಿಯೇ ಎಲ್ಲಿಂದಲೋ, ಅಮೂಲ್ಯ ಹಾಜರಾದ. ಒಬ್ಬರನ್ನೊಬ್ಬರು ನೋಡಿ ನಕ್ಕರು.

"ಹೋಗುವ ಹೊತ್ತಿಗೆ ಗದ್ದಲ ಬೇಡ. ಕರಕೊಂಡು ಹೋಗು" ಎಂದಳು ಅನ್ನಪೂರ್ಣೆ.

"ಹೇಗಿದ್ದರೂ ನಾನು ನಿಮ್ಮ ಬಳಿ ನಿಲ್ಲಲಾರೆ." ತಾಯಿಗೆ ಎನ್ನುತ್ತ ಅಮೂಲ್ಯ ಪಲ್ಲಕ್ಕಿ ಹತ್ತಿ ಕುಳಿತೇ ಬಿಟ್ಟ.

೬

ಬಿಂದುವಾಸಿನಿ ಅಮೂಲ್ಯನೊಂದಿಗೆ ತವರಿನಿಂದ ಮರಳಿ ಕೆಲವೇ ದಿನಗಳು ಕಳೆದಿದ್ದವು. ಒಂದು ದಿನ ಮಧ್ಯಾಹ್ನ ಅನ್ನಪೂರ್ಣೆ ಹರಟೆ ಕೊಚ್ಚಲು ಬಿಂದುವಾಸಿನಿಯ ಕೋಣೆಯ ಕಡೆಗೆ ಹೋದಳು.

ಬಿಂದು ವಸ್ತ್ರಗಳ ರಾಶಿಯ ಎದುರು ಮಂತ್ರ ಮುಗ್ಧ ಗೊಂಬೆಯಂತೆ ಬಾಡಿದ ಮೋರೆಯಿಂದ ಕುಳಿತಿದ್ದಳು.

"ಮಡಿವಾಳ ಬಂದಿದ್ದಾನೆಯೇ ?"

ಬಿಂದುವಾಸಿನಿ ಮಾತಾಡಲಿಲ್ಲ. ಅನ್ನಪೂರ್ಣೆ ಹತ್ತಿರ ಹೋಗಿ ಅಲುಗಾಡಿಸಿ ಕೊಂಚ ಹೆದರಿಕೆಯಿಂದಲೇ ಕೇಳಿದಳು.

"ಏನಾಗಿದೆ ನಿನಗೆ ?"

ಒಂದು ಬೆರಳಿನಿಂದ ಅರ್ಧಸುಟ್ಟ ಸಿಗರೇಟು ತುಣುಕುಗಳನ್ನು ತೋರಿಸುತ್ತ ದುಃಖಮಿಶ್ರಿತ ಧ್ವನಿಯಲ್ಲಿ ಹೇಳಿದಳು.

"ಅಮೂಲ್ಯನ ಶರ್ಟಿನ ಕಿಸೆಯಲ್ಲಿ ಸಿಕ್ಕವು."

ಅನ್ನಪೂರ್ಣೆ ದಂಗಾಗಿ ಬಿಟ್ಟಳು. ಬಿಂದುವಿಗೆ ಇಷ್ಟು ಹೊತ್ತು ತಡೆಹಿಡಿದ ಕಣ್ಣೀರು ಒಮ್ಮೆಲೇ ಉಕ್ಕಿ ಬಂದಿತು. ಅನ್ನಪೂರ್ಣೆಯ ಕಾಲು ಹಿಡಿದು ನುಡಿದಳು.

"ನನ್ನಿಂದ ಸಹಿಸಲಾಗುವದಿಲ್ಲ ಅಕ್ಕ— ಆ ಜನರನ್ನು ಹೇಗಾದರೂ ಮಾಡಿ ಕಳಿಸಿ. ಇಲ್ಲದಿದ್ದರೆ ನಾವೇ ಬೇರೆಡೆಗೆ ಹೋಗುವಂತೆ ಮಾಡಿ...." ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಅನ್ನಪೂರ್ಣೆ ಸ್ತಬ್ಧಳಾಗಿ ನಿಂತಿದ್ದಳು. ಅನೇಕ ವಿಚಾರಗಳು ಅವಳ ತಲೆಯಲ್ಲಿ ಸುತ್ತಾಡಿದವು. ಆದರೂ ಒಂದು ಬಗೆಯ ಶೂನ್ಯತೆ ಕವಿದಿತ್ತು. ಬಿಂದುವಾಸಿನಿಗೆ ಆದ ಆಘಾತವನ್ನು ಆಕೆ ಅರ್ಥ ಮಾಡಿಕೊಂಡಿದ್ದಳು. ಪ್ರೀತಿಯಿಂದ ಸಾಕಿದ ಮಗು ಹೀಗೆ ಬೇರೆಯವರ ಜೊತೆ ಬಿದ್ದು ಹಾಳಾಗುತ್ತಾನಲ್ಲ, ಎಂದು ಅವಳಿಗೂ ಕೂಡ ಒಂದು ಗಳಿಗೆ ಕೆಡಕೆನಿಸಿತು. ಆದರೆ....ಪಾಪ! ಅವಳಿಂದೇನಾಗುವದು ? ಕೇವಲ ಸಹಾನುಭೂತಿಯಿಂದ ಬಿಂದುವಿನ ಕಡೆಗೆ ನೋಡಿ ಹಾಗೆಯೇ ಹೊರಟುಹೋದಳು.

ಸಂಜೆ ಸುಮಾರು ೫ ಘಂಟೆಗೆ ಅಮೂಲ್ಯ ತಿಂಡಿ ತಿಂದು ಆಡಲು ಹೋದ. ಸ್ವಲ್ಪಹೊತ್ತಿನಲ್ಲೇ ಮನೆಯ ಜವಾನ ತಕರಾರು ತೆಗೆದುಕೊಂಡು ಬಂದ.

"ಅಮ್ಮ ನರೇಂದ್ರಬಾಬು ಕಾರಣವಿಲ್ಲದೇ ಅಮೂಲ್ಯನನ್ನು ಹೊಡೆದರು."

"ಯಜಮಾನಿಗೆ ಹೋಗಿ ಹೇಳು."

ಮೌನದಲ್ಲಿಯೇ ರಾತ್ರಿಯಾಯಿತು. ಜವಾನ ಕೋಣೆಯಲ್ಲಿ ದೀಪ ಉರಿಸಿ ಸಣ್ಣದು ಮಾಡಿ ಹೋದ. ಮೂಲೆಯಲ್ಲಿ ಕುಳಿತ ಬಿಂದುವಾಸಿನಿ ಏಳುವ ಸಾಹಸ ಮಾಡಲಿಲ್ಲ. ಅತ್ತು ಅತ್ತು ಕಣ್ಣು ಕೆಂಪಗಾಗಿದ್ದವು. ಅನ್ನಪೂರ್ಣೆ ಕೋಣೆಗೆ ಬಂದು ಅವಳ ಬೆನ್ನು ನೇವರಿಸುತ್ತ ವಿನಯಪೂರ್ಣ ಧ್ವನಿಯಿಂದ ನುಡಿದಳು.

"ಅವನು ಎಷ್ಟೆಂದರೂ ನಿನ್ನ ಮಗ. ಈ ಕೋಣೆಯ ಬಾಗಿಲು ಹಾಕಿ ಚೆನ್ನಾಗಿ ಹೊಡೆ."

"ಅವನು ನನ್ನ ಮಗನಲ್ಲವೆಂದು ನಿಮಗೆ ಚೆನ್ನಾಗಿ ಗೊತ್ತಿದೆ. ಆದರೂ ಹೀಗೆ ಹೇಳುತ್ತಿದ್ದೀರಿ."

"ಛೀ ! ಹೀಗೇಕವ್ಮಾ ನುಡಿಯುತ್ತಿ ? ಎಂದೋ ನಿನಗೆ ಒಪ್ಪಿಸಿದ್ದೇನೆ."

ಅವಳ ಮಾತನ್ನು ಅರ್ಧಕ್ಕೆ ತಡೆದು ಬಿಂದು ನುಡಿದಳು.

"ಚಿಕ್ಕವನಿದ್ದಾಗ ಕುಡಿಸಿದ್ದೆನೆ–ಉಣಿಸಿದ್ದೇನೆ–ಎಲ್ಲರೂ ಮುದ್ದು ಮಾಡುವಂತೆ ಮಾಡಿದ್ದೇನೆ. ಮಗು ಈಗ ದೊಡ್ಡವನಾಗಿದ್ದಾನೆ. ನೀವೇ ನೋಡಿಕೊಳ್ಳಿ" ಎಂದು ಮಾತು ಬೆಳೆಸದೇ ಮೂಲೆಯಿಂದೆದ್ದು ಬಚ್ಚಲು ಮನೆಗೆ ಹೊರಟಳು.

ರಾತ್ರಿ ಅಮೂಲ್ಯ ಸಣ್ಣ ಧ್ವನಿಯಲ್ಲಿ ಅಳುತ್ತ ತಾಯಿ ಮಲಗಿದ್ದಲ್ಲಿ ಬಂದ. ಅನ್ನಪೂರ್ಣೆಗೆ ಘಟನೆ ಅರ್ಥವಾದರೂ ಕೊಂಚ ಸಿಟ್ಟಿನಿಂದ ನುಡಿದಳು.

"ಇಲ್ಲೇಕೆ ಬಂದೆ ? ಹುಂ. ಹೋಗು ಇಲ್ಲಿಂದ."

ಅಮೂಲ್ಯ ನೀರು ತುಂಬಿದ ಕಣ್ಣುಗಳಿಂದ ತಾಯಿಯ ಕಡೆಗೊಮ್ಮೆ ನೋಡಿದ. ಹಾಗೆಯೇ ತಲೆ ತಗ್ಗಿಸಿ ಸಾವಕಾಶವಾಗಿ ಹೊರಟುಹೋದ.

ಬೆಳಗ್ಗೆ ಕೆಲಸದವಳು ಅಡಿಗೆ ಮನೆಗೆ ಹೋದಾಗ ಅಲ್ಲಿ ನೆಲದಮೇಲೆ ಮಲಗಿದ್ದ ಅಮೂಲ್ಯನನ್ನು ಕಂಡು ಅವಳಿಗೆ ಅತ್ಯಾಶ್ಚರ್ಯವಾಯಿತು. ಕೂಡಲೇ ಓಡುತ್ತಹೋಗಿ ಬಿಂದುವಾಸಿನಿಯನ್ನು ಕರೆದು ತಂದಳು. ಇಷ್ಟೊತ್ತಿಗೆ ಅನ್ನಪೂರ್ಣೆ ಕೂಡ ಹಾಸಿಗೆ ಬಿಟ್ಟು ಹೊರಗೆ ಬಂದಿದ್ದಳು.

ಬಿಂದುವಾಸಿನಿ ಗಡಸು ಧ್ವನಿಯಲ್ಲಿ ನುಡಿದಳು.

"ರಾತ್ರಿ ಯಜಮಾನಿ ಹೊರಗೆ ಹಾಕಿರಬೇಕು ... ಆದಕ್ಕಾಗಿಯೇ ಇಲ್ಲಿ ಬಂದು ಮಲಗಿದ್ದಾನೆ."

ಮಗನ ಅವಸ್ಥೆ ಕಂಡು ಮೊದಲೇ ದುಃಖಿತಳಾದ ಅನ್ನಪೂರ್ಣೆಗೆ ಗಾಯದ ಮೇಲೆ ಬರೆ ಇಕ್ಕಂತಾಯಿತು. ಅವಳಿಗೆ ಈ ಹೊಸ ಆರೋಪ ಸಹಿಸಲಾಗಲಿಲ್ಲ.

ಗದ್ಗದ ಕಂಠದಿಂದ ನುಡಿದಳು.

"ತನ್ನ ತಪ್ಪನ್ನು ಬೇರೆಯವರ ಮೇಲೆ ಹೊರಿಸಿದಾಗ ಬಹಳ ಆನಂದ ವಾಗುತ್ತದಲ್ಲವೇ?"

ಬಿಂದು ಅಮೂಲ್ಯನನ್ನು ಎಬ್ಬಿಸಲು ಹೋದಾಗ ಅಮೂಲ್ಯನ ಮೈ ಬಿಸಿ ಯಾದಂತೆ ಭಾಸವಾಯಿತವಳಿಗೆ.

"ಕಾರ್ತಿಕದಲ್ಲಿ ಕಲ್ಲಿನ ನೆಲದಮೇಲೆ ಮಲಗಿದರೆ ಜ್ವರ ಬರುವದು ಸಹಜ. ಇನ್ನು ಗುಣವಾಗಬೇಕಾದರೆ ಎಷ್ಟು ಕಷ್ಟ ಪಡಬೇಕೋ."

ಅನ್ನಪೂರ್ಣೆ ಹೌಹಾರಿದಳು. ಕಾತರ ಧ್ವನಿಯಲ್ಲಿ ಕೇಳಿದಳು.

"ಜ್ವರ ಬಂದಿದೆಯೋ? ಎಲ್ಲಿ ನೋಡುವ?"

ಬಿಂದುವಾಸಿನಿ ಒಂದು ಕೈಯಿಂದ ಅನ್ನಪೂರ್ಣೆಯನ್ನು ಬದಿಗೆ ಸರಿಸಿದಳು.

"ಹುಂ. ನೋಡಿದ್ದು ಸಾಕು" ಎಂದು ಒಂದು ಬಾರಿ ಅನ್ನಪೂರ್ಣೆಯತ್ತ ವಿಷಭರಿತ ಕಟಾಕ್ಷವನ್ನೆಸೆದು ಅಮೂಲ್ಯನನ್ನು ಹೊತ್ತುಕೊಂಡು ತನ್ನ ಕೋಣೆಗೆ ಹೊರಟು ಹೋದಳು.

ಎರಡೇದಿನಗಳಲ್ಲಿ ಅಮೂಲ್ಯನಿಗೆ ಗುಣವಾಯಿತು. ಆದರೆ ಬಿಂದುವಾಸಿನಿ ಅನ್ನಪೂರ್ಣೆಯ ತಪ್ಪನ್ನು ಕ್ಷಮಿಸಲಿಲ್ಲ. ಅವಳೊಂದಿಗೆ ಸರಿಯಾಗಿ ಮಾತು ಕೂಡ ಆಡುತ್ತಿದ್ದಿಲ್ಲ.

ಅನ್ನಪೂರ್ಣೆ ಇವೆಲ್ಲ ಗೊತ್ತಿದ್ದು ಸುಮ್ಮನಿದ್ದಳು. ಈ ಅನ್ಯಾಯವನ್ನು ಎಲ್ಲರ ಎದುರು ತನ್ನ ಮೇಲೆ ಹೊರಿಸಿದುದನ್ನು ಅವಳು ಮರೆಯಲಿಲ್ಲ. ಇದರಿಂದ ತುಂಬ ನೊಂದಿತು ಅವಳ ಮನಸ್ಸು. ಹೀಗಾಗಿ ಒಂದು ದಿನ ಎಲೋಕೇಶಿ ಯೊಂದಿಗೆ ಮಾತಾಡುತ್ತಿದ್ದಾಗ ಅವಳಿಗರಿವಿಲ್ಲದಂತೆ ಈ ಸಂದರ್ಭ ತೆಗೆದಳು.

"ಮಗುವಿಗೆ ಜ್ವರ ಬಂದದ್ದು ಬಿಂದುವಿನಿಂದಲೇ. ಅವನು ಬದುಕಿ ಉಳಿದಿದ್ದು ಅವಳ ಸೌಭಾಗ್ಯ"

ಎಲೋಕೇಶಿಗೂ ಅದೇ ಬೇಕಾಗಿತ್ತು. ಅವಳು ಒಂದಕ್ಕೆರಡು ಮಾಡಿ

ಬಿಂದುವಾಸಿನಿಗೆ ಈ ಮಾತು ಮುಟ್ಟಸದಿರಲಿಲ್ಲ. ಬಿಂದು ಕಿವಿಗೊಟ್ಟು ಕೇಳಿದಳು. ಅಂದಿನಿಂದ ಅನ್ನಪೂರ್ಣೆಯೊಂದಿಗೆ ಪೂರ್ತಿಯಾಗಿ ಮಾತುಬಿಟ್ಟಳು.

ಬಹಳ ದಿನಗಳಿಂದ ಹೊಸಮನೆಗೆ ಸರಕುಗಳನ್ನು ಸ್ವಲ್ಪ ಸ್ವಲ್ಪ ಕಳಿಸಲು ಪ್ರಾರಂಭಿಸಿದ್ದರು. ಮರುದಿನವೇ ಮನೆಯವರೆಲ್ಲ ಹೊಸಮನೆಗೆ ಹೋಗುವವರಿದ್ದರು. ಮಾಧವ ಮನೆಯಲ್ಲಿದ್ದಿಲ್ಲ. ಯಾದವ ಮಕ್ಕಳನ್ನು ಕರೆದುಕೊಂಡು ಮುಂಚಿತವಾಗಿ ಹೋಗಿದ್ದ.

ಸಂಜೆ ಮಾಸ್ತರರು ಕಲಿಸಲು ಬಂದಾಗ ಬಿಂದು ಅವರನ್ನು ಕರೆದು ಹೇಳಿದಳು.

"ನಾಳೆಯಿಂದ ಆ ಮನೆಗೆ ಬನ್ನಿ."

"ಆಗಬಹುದು"

"ಅಮೂಲ್ಯ ಶಾಲೆಯಲ್ಲಿ ಹೇಗೆ?"

"ಕಲಿಯಲು ಬಹಳ ಚೆನ್ನಾಗಿದ್ದಾನೆ. ಪ್ರತಿವರ್ಷ ಮೇಲೆ ಬಂದು ಪಾಸಾಗುತ್ತಾನಲ್ಲ?"

"ಹುಂ. ಬರುತ್ತಾನೇನೋ ಹೌದು, ಆದರೆ ಕೆಲದಿನಗಳಿಂದ ಸಿಗರೇಟು ಸೇದಲು ಕಲಿತಿದ್ದಾನೆ."

ಮಾಸ್ತರರಿಗೆ ಆಶ್ಚರ್ಯವಾಯಿತು. ಕೊಂಚ ಹೊತ್ತು ತಡೆದು ಹೇಳಿದರು.

ಆಶ್ಚರ್ಯದ ಮಾತೇನೂ ಅಲ್ಲ; ಮಕ್ಕಳು ನೋಡಿ ಕಲಿಯುತ್ತಾರೆ."

ಬಿಂದುವಿಗೆ ಸ್ವಲ್ಪ ಸಮಾಧಾನವಾಯಿತು. ಮಾಸ್ತರರೂ ತನ್ನ ಹಾಗೆಯೇ ವಿಚಾರ ಮಾಡುತ್ತಾರೆಂದು ತಿಳಿದು ಸ್ವಲ್ಪ ಹಾಯೆನಿಸಿತು. ಮಾಸ್ತರರು ಮುಂದೇನೂ ಹೇಳಲಿಲ್ಲ.

"ಅವನ ತಂದೆಗೆ ಈ ಸುದ್ದಿ ಮುಟ್ಟಸಿ."

ಮಾಸ್ತರರು ತಲೆಯಲ್ಲಾಡಿಸುತ್ತ ಹೇಳಿದರು.

"ಹುಂ. ನೋಡಿರಲ್ಲ. ೫-೬ ದಿನಗಳ ಹಿಂದೆ ಒಂದು ದಿನ ಶಾಲೆಯಿಂದ ಬರುವಾಗ ಒಂದು ತೋಟವನ್ನು ಹೊಕ್ಕು ಮಾವಿನಕಾಯಿ ಹರಿದ. ತಡೆಯಲು ಬಂದ ತೋಟವವನ ಮಗನನ್ನು ಹೊಡೆದ. ಬಹಳ ಗದ್ದಲವಾಯಿತು ಆ ದಿನ."

ಬಿಂದುವಾಸಿನಿ ಮಾತಾಡಲು ಪ್ರಯತ್ನಿಸಿದಳು. ಆಗಲಿಲ್ಲ—ಅವಳು. ತುಂಬ ಹೆದರಿದ್ದಳು. ಅವಳ ಹಣೆಯಲ್ಲಿ ಬೆವರಿನ ಹನಿಗಳು ಮಿನುಗುತ್ತಿದ್ದವು.

"ಬಳಿಕ ತೋಟದವನು ಹೆಡ್‌ಮಾಸ್ತರರಿಗೆ ತಿಳಿಸಿದ. ಅವರು ಇವನಿಗೆ ಹತ್ತುರೂಪಾಯಿ ದಂಡ ವಿಧಿಸಿದರು. ಅವನು ಅಷ್ಟು ಹಣ ತೆತ್ತಬೇಕಾಯಿತು."

"ಯಾರು? ಅಮೂಲ್ಯನೆ? ಅವನಿಗೆ ಎಲ್ಲಿಂದ ಸಿಕ್ಕಿತು?" ಮಾಸ್ತರರು ಮುಂದುವರಿಸಿದರು. "ನರೇಂದ್ರ ಕೂಡ ಅದೇ ಗುಂಪಿನಲ್ಲಿದ್ದ. ಮತ್ತೇ ಐದಾರು ಪುಂಡ ಹುಡುಗರಿದ್ದರು."

"ರೂಪಾಯಿ ವಸೂಲಾಯಿತೆ?"

"ಹೌದು, ಹೆಡ್‌ಮಾಸ್ತರರು ಹೇಳುವಾಗ ಕೇಳಿದ್ದೇನೆ."

"ಹುಂ. ಈಗ ಬೇಕಾದರೆ ಹೋಗಬಹುದು." ಎಂದು ಮಾಸ್ತರರನ್ನು ಕಳಿಸಿ ಅಲ್ಲಿಯೇ ಕುಳಿತಳು. ಅವಳಿಗೆ ಅರಿವಿಲ್ಲದಂತೆ ಅಸ್ಫುಟ ಸ್ವರದಲ್ಲಿ ಶಬ್ದಗಳು ಹೊರಬಿದ್ದವು.

"ನನಗೆ ತಿಳಿಯದಂತೆ ಯಾರು ಹಣ ಕೊಟ್ಟಿರಬಹುದು? ಇಷ್ಟು ಧೈರ್ಯ ಯಾರು ಮಾಡಿರಬಹುದು?"

ಅವಳು ಕೂಡಲೇ ಎದ್ದು ಸರಸರನೆ ಅಡಿಗೆಮನೆಯತ್ತ ಹೊರಟಳು. ಅನ್ನಪೂರ್ಣೆ ರಾತ್ರಿಗಾಗಿ ಕಾಯಿಪಲ್ಲೆ ಹೆಚ್ಚುತ್ತಿದ್ದಳು.

"ಅಕ್ಕ, ಈ ಮಧ್ಯೆ ಮಗುವಿಗೆ ರೂಪಾಯಿ ಕೊಟ್ಟಿದ್ದೀರಾ?"

ಅನ್ನಪೂರ್ಣೆಗೆ ಬಿಂದುವಾಸಿನಿ ಒಳಗೆ ನುಗ್ಗಿದಾಗಲೇ ಸಂಶಯಬಂದಿತ್ತು. ಹೆದರಿಕೆಯಿಂದ ಆಕೆಯ ಗಂಟಲು ಒಣಗಿತು.

"ಯಾರು ಹೇಳಿದರು?"

"ಈ ಮಾತು ಅಷ್ಟು ಮಹತ್ವದ್ದಲ್ಲ. ಅವನು ಯಾತಕ್ಕೆಂದು ಕೇಳಿದ? ನೀವೇಕೆ ಕೊಟ್ಟಿರಿ?"

ಅನ್ನಪೂರ್ಣೆ ಸುಮ್ಮನಿದ್ದಳು.

"ಮಗು ಎಷ್ಟೇ ಸುಳ್ಳು ಹೇಳಿದರೂ ದೊಡ್ಡವರೆದುರು ಸುಳ್ಳು ಮಾತಾಡುವ ಧೈರ್ಯ ಆತನಲ್ಲಿ ಬರಲಿಕ್ಕಿಲ್ಲ. ನಿಮಗೆ ಗೊತ್ತಿದ್ದೂ ಕೊಟ್ಟಿರಿ. ಅಲ್ಲವೇ?"

ಅನ್ನಪೂರ್ಣೆ ಧೈರ್ಯ ತಂದುಕೊಂಡು ಹೇಳಿದಳು.

"ಹುಂ ನಿಜ, ಆದರೆ–ಈ ಸಲ ಕ್ಷಮಿಸ.........."

ಬಿಂದುವಾಸಿನಿಯ ಹೃದಯದಲ್ಲಿ ಬೆಂಕಿ ಹೊತ್ತಿಸಿದಂತಾಯಿತು.

"ಕೇವಲ ಈ ಸಾರೆ ಕ್ಷಮಿಸಲೇ? ಛೇ, ಛೇ, ಬೇಡ. ಕಾಯಂ ಆಗಿ

ಕ್ಷಮಿಸುತ್ತೇನೆ. ಇನ್ನೆಂದೂ ನಾನು ಏನೂ ಹೇಳಲಿಕ್ಕಿಲ್ಲ. ಆದರೆ... ....ಆದರೆ ಮಗು ಈ ರೀತಿ ಸಾವಕಾಶವಾಗಿ ನರಕಕ್ಕಿಳಿಯುವದನ್ನು ನಾನು ಸಹಿಸಲಾರೆ. ಇದಕ್ಕಿಂತ ಒಮ್ಮೆಲೆ ಇಳಿಯುವದು ಲೇಸು. ಅಬ್ಬ! ಅದೆಷ್ಟು ನಿಮ್ಮ ಧೈರ್ಯ?"

ಕೊನೆಯ ಮಾತು ಅನ್ನಪೂರ್ಣೆಯನ್ನು ಸಿಟ್ಟಿಗೆಬ್ಬಿಸಿತು. ಬಿಂದುವಾಸಿನಿ ಸಿಟ್ಟನ್ನು ತಡೆಯಲಾರದೇ ಕೂಗಿದಳು.

"ಎಲ್ಲ ಸಂಗತಿಗಳನ್ನೂ ಏನೂ ಗೊತ್ತಿಲ್ಲದವರಂತೆ ನಟಿಸುತ್ತೀರಿ. ಈ ಸಲ ಕ್ಷಮಿಸು. ಆಹಾಹಾ! ನಿಮ್ಮದೆಷ್ಟು ದೋಷವಿದೆಯೋ ಪಾಪ ! ಅಮೂಲ್ಯನದು ಅಷ್ಟಿಲ್ಲ. ಇಲ್ಲ, ಕ್ಷಮಿಸಲಾರೆ."

ಅನ್ನಪೂರ್ಣೆಗೆ ಸಹಿಸಲಾರದಾಯಿತು.

"ಏನು ಮಾಡುವಿ? ಫಾಸೀ ಕೊಡುವಿಯೇನು?"

ಬೆಂಕಿಗೆ ಆಹುತಿ ಹಾಕಿದಂತಾಯಿತು.

"ಹುಂ. ಅದೇ ನಿಮಗೆ ತಕ್ಕ ಶಿಕ್ಷೆ."

"ಮಗುವಿಗೆ ಎರಡು ರೂಪಾಯಿ ಕೊಟ್ಟರೆ ದೊಡ್ಡ ಅಪರಾಧವಾಯಿತೇ?"

ಬಿಂದುವಾಸಿನಿ ಜಗಳದ ಮೂಲ ಕಾರಣವನ್ನೇ ಮರೆತಿದ್ದಳು. ಅನ್ನಪೂರ್ಣೆ ಎರಡು ರೂಪಾಯಿ ಎಂದಾಗ ಅವಳು ಯೋಚಿಸಬೇಕಾಗಿತ್ತು. ಅಮೂಲ್ಯನಿಗೆ ಜುಲ್ಮಾನೆ ವಿಧಿಸಿದ್ದು ಹತ್ತು ರೂಪಾಯಿ. ಅನ್ನಪೂರ್ಣೆ ಕೊಟ್ಟದ್ದು ಎರಡೇ ರೂಪಾಯಿ. ಆದರೆ ಸಿಟ್ಟಿನ ಭರದಲ್ಲಿದ್ದ ಅವಳು ಆವೇಶ ದಿಂದ ಕೂಗಿದಳು.

"ಅದಾದರೂ ಏಕೆ ಕೊಡಬೇಕಾಗಿತ್ತು ? ಹಾಳು ಮಾಡಲು ರೂಪಾಯಿ ಗಳು ಎಲ್ಲಿಂದ ಬಂದವು?"

"ನೀನು ಹಾಳು ಮಾಡುವದಿಲ್ಲವೆ ?"

"ನಾನು ಹಾಳಮಾಡುವದು ನನ್ನ ರೂಪಾಯಿ. ನೀವು ಯಾರದು ಹಾಳು ಮಾಡುತ್ತೀರಿ ? ಹೇಳಿ ನೋಡುವ."

ಈಗ ಮಾತ್ರ ಅನ್ನಪೂರ್ಣೆಗೆ ತುಂಬ ಸಿಟ್ಟು ಬಂದಿತು. ಅವಳು ಬಹಳ ಬಡಕುಲದಲ್ಲಿ ಹುಟ್ಟಿದವಳು, ಇದು ವ್ಯಂಗ್ಯ ನುಡಿಯೆಂದು ಆಕೆ ಕೂಡಲೇ ಅರಿತುಕೊಂಡಳು. ಎದ್ದು ನಿಂತು ಹೇಳಿದಳು.

"ನೀನು ದೊಡ್ಡ ಕುಲದಲ್ಲಿ ಹುಟ್ಟಿದವಳು. ಶ್ರೀಮಂತ ಮನೆತನದವಳು.

ಒಪ್ಪಿದೆ. ಆದರೆ ಈ ಮಾತಿನ ಮೇಲೆ ಅಷ್ಟೆಲ್ಲ ಅಹಂಕಾರ ಬೇಡ. ಚಿಲ್ಲರೆ ಮನುಷ್ಯರು ಕೂಡ ಎರಡು ರೂಪಾಯಿ ಕೊಡಬಲ್ಲರು ತಿಳಿಯಿತೇ?"

"ಅಹಂಕಾರದ ಮಾತಲ್ಲ, ಆದರೆ ಕೊಂಚ ವಿಚಾರ ಮಾಡಿ ನೋಡಿ. ನೀವು ಕೊಟ್ಟಿರುವ ರೂಪಾಯಿ ಯಾರದು?" ಬಿಂದು ಕೆಣಕಿದಳು.

ಅನ್ನಪೂರ್ಣೆ ಬಿಂದುವಾಸಿನಿಯ ಸಮೀಪಕ್ಕೆ ಹೋಗಿ ಸೊಂಟದ ಮೇಲೆ ಕೈಯಿಕ್ಕಿ ದುರುಗುಟ್ಟಿ ಕೂಗಿದಳು.

"ಅಂದರೆ? ನಿನ್ನ ಮಾತಿನ ಅರ್ಥ ಏನು? ನಿನಗೆ ಕೇಳುವ ಅಧಿಕಾರ ಎಲ್ಲಿಯದು? ಮನಸ್ಸಿಗೆ ಬಂದಂತೆ ಮಾತಾಡುತ್ತೀಯಾ, ಹುಂ ತೊಲಗಾಚೆ. ಕಣ್ಮುಂದೆ ನಿಲ್ಲಬೇಡ—"

"ಬೆಳಗಾದ ಕೂಡಲೇ ಹೋಗುವದಿದೆಯಲ್ಲ? ಅದಿರಲಿ, ಯಾರ ದುಡ್ಡು ಖರ್ಚು ಮಾಡುತ್ತೀರಿ ಎಂದರೆ ಉತ್ತರ ಕೊಡುವದಿಲ್ಲವಲ್ಲ ನೀವು? ಯಾರ ದುಡಿಮೆಯಿಂದ ಉಣ್ಣುತ್ತೀರಿ? ಧರಿಸುತ್ತೀರಿ?— ಗೊತ್ತಿಲ್ಲವೆ?"

ಮಾತು ಮುಗಿದ ಕೂಡಲೇ ಬಿಂದುವಾಸಿನಿ ಸ್ತಬ್ಧಳಾದಳು. ಅವಳ ಆವೇಶ ಕೂಡಲೇ ಇಳಿಯಿತು. ಮಾತಿನ ಭರದಲ್ಲಿ ಆಡಿದ ತಪ್ಪನ್ನು ಆಕೆ ಅರಿತುಕೊಂಡಿದ್ದಳು.

ಅನ್ನಪೂರ್ಣೆಯ ಮುಖ ಕಪ್ಪಾಗಿ ಬಿಟ್ಟಿತು. ಒಂದು ಕ್ಷಣ ಆಕೆಗೆ ಏನು ಮಾತಾಡಬೇಕೆಂದು ತೋಚಲಿಲ್ಲ. ಸಾವಕಾಶವಾಗಿ ತಲೆಯೆತ್ತಿ ಬಿಂದುವಾಸಿನಿಯನ್ನು ದಿಟ್ಟಿಸಿ ಹತಾಶ, ಹತಬುದ್ಧ, ಕ್ಷೀಣ ಸ್ವರದಲ್ಲಿ ನುಡಿದಳು.

"ಹೌದು. ನಿನ್ನ ಪತಿಯು ದುಡಿತದಿಂದ ಬಾಳುತ್ತಿದ್ದೇನೆ— ನಾನು ನಿನ್ನ ದಾಸಿ— ಅವರು ನಿಮ್ಮ ಕೆಲಸದವರು.... ಇದೇ ಅಲ್ಲವೇ ನೀನು ಆಗಿನಿಂದ ಹೇಳುತ್ತಿದ್ದುದು? ಇದನ್ನು.... ಇದನ್ನು ಈ ಹಿಂದೆಯೇ ಏಕೆ ಹೇಳಲಿಲ್ಲ?" ಮಾತಾಡುತ್ತಿದ್ದಂತೆ ಅನ್ನಪೂರ್ಣೆಯ ದುಃಖ ಹೆಚ್ಚಾಗತೊಡಗಿತು. ಅವಳ ತುಟಿ ಕಂಪಿಸಿದುವು. ಹಲ್ಲುಗಳಿಂದ ತುಟಿಕಚ್ಚಿ ಅಲುಗುತ್ತಿದ್ದ ಅವುಗಳನ್ನು ಸ್ಥಿರಗೊಳಿಸಿದಳು. ಉಗುಳು ನುಂಗಿ ಮಾತನ್ನು ಮುಂದುವರಿಸಿದಳು.

"ತಮ್ಮನ ಶಿಕ್ಷಣಕ್ಕಾಗಿ ದೇಹ ಸವೆದ ದಿನಗಳು ಎಲ್ಲಿ ಹೋದವು? ಒಂದು ಜೋಡಿ ಧೋತರಕೂಡ ಇಲ್ಲದೇ ಕಳೆದ ದಿನಗಳು.... ಆಗ ನೀನೆಲ್ಲಿದ್ದೆ.... ನೀನೆಲ್ಲಿದ್ದೆ ಆಗ?.... ಒಂದು ಸಲ.... ಒಂದು ಸಲ ಮನೆಗೆ ಬೆಂಕಿ ಬಿದ್ದಾಗ,

ಒಂದು ಗುಡಿಸಲು ಕಟ್ಟಿಸಿ ಅದರಲ್ಲಿದ್ದು— ಕೊನೆಗೆ ಈ ಮನೆ ಕಟ್ಟಿಸಿದಾಗ.... ಆಗ ನೀನೆಲ್ಲಿದ್ದೆ? ಮುಲತಮ್ಮನಾಗಿದ್ದರೂ ಕೂಡ ಅಷ್ಟು ಪ್ರೀತಿಯಿಂದ ಸಾಕಿದ ಆ ದಿನಗಳು ಎಲ್ಲಿ ಹೋದವು?"

ಹಿಂದಿನ ನೆನಪುಗಳು ಆಕೆಯನ್ನು ಮುತ್ತಿಕೊಂಡವು. ಕಣ್ಣುಗಳಿಂದ ಟಪ ಟಪ ಹನಿಗಳುದುರಲಾರಂಭಿಸಿದವು. ಸೆರಗಿನಿಂದ ಒರಸಿಕೊಂಡು ಮುಂದೆ ಹೇಳಿ ದಳು.

''ನಿಮ್ಮ ಮನದೊಳಗಿನ ಗುಟ್ಟು ಅವರಿಗೆ ತಿಳಿದಿದ್ದರೆ.........ಅವರೆಂದೂ ಹೀಗೆ ಅಫೀಮು ತಿಂದು ಕಾಲ ಮೇಲೆ ಕಾಲ ಹಾಕಿ ಕೂಡ್ರುತ್ತಿದ್ದಿಲ್ಲ. ಈ ತರದ ಮನುಷ್ಯರೇ ಅಲ್ಲ ಅವರು. ನಿನ್ನಗಂಡ ಅವರನ್ನು ಗುರುತಿಸಿದ್ದಾನೆ.ಅವರಲ್ಲಿರುವ ಸದ್ಗುಣಗಳ ಪರಿಚಯು ಅವನಿಗೆ ಸಾಕಷ್ಟಾಗಿದೆ. ಸ್ವರ್ಗದ ದೇವತೆಗಳಿಗೆ ಕೂಡ ಗೊತ್ತಿದೆ ಅವರ ಗುಣ. ಇಂದು....ಇಂದು ನೀನು ನನಗಾಗಿ ಅವರ ಅಪಮಾನ ಮಾಡಿದಿಯಾ?"

ಪತಿಯು ಸದ್ಗುಣಗಳನ್ನು ನೆನೆದು ಅವಳ ಹೃದಯ ಅಭಿಮಾನದಿಂದ ತುಂಬಿ ಬಂದಿತು.

''ಈಗಾದರೂ ನೀನು ಹೇಳಿದ್ದು ಬಹಳ ಒಳ್ಳೆಯದಾಯಿತು. ಮನಸ್ಸನ್ನು ಕೊರೆಯುತ್ತಿದ್ದ ಕೀಟವನ್ನು ಹೊರದೆಗೆದು ಒಗೆದಂತಾಯಿತು............ಯಾರ ಮನೆಯ ಅಡಿಗೆಯನ್ನಾದರೂ ಮಾಡೇನು. ಆದರೆ.... ನಿನ್ನ ಮನೆಯ ಅನ್ನ ಇನ್ನುಮುಂದೆ ಉಣ್ಣಲಿಕ್ಕಿಲ್ಲ........ಏಕೆ ಗೊತ್ತೆ? ನೀನು ಅವರನ್ನು ಅಪಮಾನ ಗೊಳಿಸಿದ್ದಿ.........."

ಸರಿಯಾಗಿ ಇದೇ ಸಮಯಕ್ಕೆ ಯಾದವ ಹೊರಗಿನಿಂದ ಹೆಂಡತಿಯನ್ನು ಕರೆದ.

ಪತಿಯು ಸ್ವರ ಕೇಳುತ್ತಲೇ ಅನ್ನಪೂರ್ಣೆಗೆ ಆವೇಶ ಏರಿತು. ಓಡುತ್ತ ಹೊರಗೆ ಹೋಗಿ ಹೇಳಿದಳು.

"ಛೀ ! ಛೀ ! ಯಾರಿಗೆ ತನ್ನ ಏಕಮಾತ್ರ ಪುತ್ರನಿಗೆ ಉಣಿಸುವ ತಾಕತ್ತು ಇಲ್ಲವೋ ಅವನ ಬಳಿ ಫಾಸೀ ಬೀಳಲು ಬಂದು ಹಗ್ಗವಾದರೂ ಇರಬಾರದೇ?"

ಯಾದವ ಹತಬುದ್ಧನಾದ.

"ಏನಾಯಿತು ?"

"ಏನಾಯಿತು? ಏನೂ ಆಗಿಲ್ಲ.... ಅವಳು ಇಂದು ಸ್ಪಷ್ಟವಾಗಿ ಹೇಳಿ

ದ್ದಾಳೆ- ನಾನು ಅವರ ದಾಸಿ- ನೀವು.... ನೀವು...." ಅವಳಿಗೆ ಮುಂದೆ ಮಾತಾಡ ಲಾಗಲಿಲ್ಲ.

ಕೋಣೆಯಲ್ಲಿದ್ದ ಬಿಂದುವಾಸಿನಿ ಈ ಮಾತನ್ನು ಕೇಳಲಾರದೇ ಕಿವಿ ಮುಚ್ಚಿಕೊಂಡಳು.

ಅನ್ನಪೂರ್ಣೆ ಅಳುತ್ತ ನುಡಿದಳು.

"ಇವತ್ತು ನಿಮ್ಮೆದುರಿಗೆ ನಿಂತು ಆಣೆ ಮಾಡಿ ಹೇಳುತ್ತೇನೆ. ಈ ಜನರ ಅನ್ನ ಊಟ ಮಾಡುವ ಮೊದಲು ನಾನು ಮಗುವನ್ನು ಕೊಲ್ಲಬೇಕಾದೀತು."

ಬಿಂದುವಿನ ಕಿವಿಯಲ್ಲಿ ಈ ಅಸ್ಪಷ್ಟ ಶಬ್ದಗಳು ಹೊಕ್ಕವು. ಹೆದರಿಕೆ ಯಿಂದಾಗಿ ಅವಳ ಮುಖ ಕಪ್ಪಾಗಿ ಬಿಟ್ಟಿತ್ತು. ಕಣ್ಣುಗಳು ತೇಲುತ್ತಿದ್ದವು. ದೃಷ್ಟಿ ಶೂನ್ಯವಾಗಿತ್ತು. ಅಸ್ಫುಟ ಸ್ವರದಲ್ಲಿ ಆಕೆ ನುಡಿದಳು.

"ಅಕ್ಕಾ, ಇದೇನು ಮಾಡಿದಿರಿ?" ಬಾಯಿಯಿಂದ ಪೂರ್ತಿ ಶಬ್ದಗಳು ಬರುವ ಮೊದಲೇ ಬಿಂದುವಾಸಿನಿ ಇಂದು ನಿಂತಲ್ಲಿಯೇ ಹನ್ನೆರಡು ವರುಷಗಳ ಬಳಿಕ ಮೂರ್ಛಿತಳಾಗಿ ಬಿದ್ದುಬಿಟ್ಟಳು.

## ೭

ಹೊಸಮನೆಗೆ ಯಾದವ, ಅನ್ನಪೂರ್ಣೆ ಮತ್ತು ಅಮೂಲ್ಯನ ಹೊರತಾಗಿ ಎಲ್ಲರೂ ಬಂದಿದ್ದರು. ಬಿಂದುವಾಸಿನಿಯ ತವರುಮನೆಯಿಂದ ನೆಂಟರಿಷ್ಟರು ತುಂಬ ಬಂದಿದ್ದರು. ಮನೆಯೆಲ್ಲ ಆಳು-ಕಾಳುಗಳಿಂದ ತುಂಬಿತ್ತು. ಈ ಮನೆಗೆ ಬಂದ ಕೆಲದಿನಗಳವರೆಗೆ ಬಿಂದುವಾಸಿನಿ ಉದಾಸೀನಳಾಗಿಯೇ ಇದ್ದಳು. ಕ್ರಮಶಃ ಅವಳ ಕೋಪಭಾವ ಮರೆಯಾಗತೊಡಗಿತ್ತು. ಸಿಟ್ಟು ಕಡಿಮೆಯಾದ ಬಳಿಕ ಅನ್ನಪೂರ್ಣೆ ತಾನಾಗಿಯೇ ಬರುವಳೆಂದು ಆಕೆ ತಿಳಿದಿದ್ದಳು. ಪೂಜೆ ಮಾಡುವದು, ನೆಂಟರಿಷ್ಟರನ್ನು ಸ್ವಾಗತಿಸುವದು, ಇತ್ಯಾದಿಗಳಲ್ಲೇ ಆಕೆಯ ವೇಳೆ ಕಳೆಯುತ್ತಿತ್ತು.

ಬಿಂದುವಿನ ತಂದೆ ಕೇಳಿದರು.

"ಮಗೂ, ಅಮೂಲ್ಯ ಎಲ್ಲಿ? ಕಾಣಿಸುವದಿಲ್ಲವಲ್ಲ?"

"ಆ ಮನೆಯಲ್ಲಿದ್ದಾನೆ" ಸಂಕ್ಷೇಪದಲ್ಲೇ ಮುಗಿಸಿದಳು ಬಿಂದು.

ತಾಯಿ ಕೇಳಿದರು.

"ಮಗೂ, ಅನ್ನಪೂರ್ಣೆ ಎಲ್ಲಿ?"

"ಕೆಲಸದ ಭಾರದಿಂದ ಬರಲಿಕ್ಕಾಗುವದಿಲ್ಲವೆಂದು ಕಾಣಿಸುತ್ತದೆ."

ಈ ದಿನಗಳಲ್ಲಿ ಯಾದವ ದಿನಕ್ಕೊಮ್ಮೆ ಈ ಮನೆಗೆ ಬರುತ್ತಿದ್ದ. ಹೊರಗೆ ಜಗುಲಿಯ ಮೇಲೆ ಕುಳಿತು ಬಿಂದುವಾಸಿನಿಯ ಯೋಗಕ್ಷೇಮ ವಿಚಾರಿಸಿ ಹೋಗುತ್ತಿದ್ದ. ಆದರೆ ಸರ್ವಥಾ ಒಳಗೆ ಬರುತ್ತಿದ್ದಿಲ್ಲ. ಗೃಹಪೂಜೆಯ ಮುನ್ನಾ ದಿನ ರಾತ್ರಿ ಯಾದವ ಬಂದು ಎಲೋಕೇಶಿಯೊಡನೆ ಮಾತಾಡುತ್ತಿದ್ದುದನ್ನು ಬಿಂದು ಕಂಡಳು. ಆನಂದದಿಂದ ಓಡಿ ಹೋಗಿ ಬಾಗಿಲ ಮರೆಯಲ್ಲಿ ನಿಂತಳು. ತಂದೆಗಿಂತ ಹೆಚ್ಚಾಗಿದ್ದ ಯಾದವ ಆಕೆಗೆ. ಅವಳೆಂದರೆ ತುಂಬಾ ಪ್ರೀತಿ. ಅನ್ನಪೂರ್ಣೆ ತನ್ನ ವಿರುದ್ಧ ದೂರಿಕೊಂಡರೂ ಒಂದು ದಿನ ಕೂಡ ತನ್ನನ್ನು ಬೈಯಲಿಲ್ಲ. ಪಿತೃಸಮಾನ ಯಾದವನ ಮುಖ ನೋಡುತ್ತಲೇ ಅಸೀಮ ಲಜ್ಜೆಯಿಂದ ಅವಳ ತಲೆಬಾಗಿತು. ಯಾದವ ಹೊರಟು ಹೋದ. ಬಿಂದುವಾಸಿನಿಗೆ ಹಳೆಯ ನೆನಪುಗಳು ಮರುಕಳಿಸಿದವು. ಏಕಾಂತದಲ್ಲಿ ಬಿಕ್ಕಿ ಬಿಕ್ಕಿ ಅಳ ಹತ್ತಿದಳು.

ಮರುದಿನ ಬೆಳಿಗ್ಗೆ ಬಿಂದುವಾಸಿನಿ ಪತಿಯನ್ನು ಕರೆದು ಹೇಳಿದಳು.

"ನೋಡಿ, ಗೃಹಪೂಜೆ ಆಗುವದಿದೆ. ಪುರೋಹಿತರೂ ಬಂದಿದ್ದಾರೆ. ನಿಮ್ಮ ಅಣ್ಣ ಇನ್ನೂ ಬಂದಿಲ್ಲ. ಕೊಂಚ ಕರಕೊಂಡು ಬರುವಿರಾ?"

ಮಾಧವ ವಿಸ್ಮಿತನಾಗಿ ಕೇಳಿದ.

"ಅವರು ಯಾಕೆ ಬರಬೇಕು?"

"ಅಂದರೆ? ಅವರ ಹೊರತಾಗಿ ಇದನ್ನೆಲ್ಲ ಮಾಡುವವರು ಯಾರು?"

"ನಾನು ಅಥವಾ ಪ್ರಿಯಬಾಬು. ಅಣ್ಣ ಬರುವದಿಲ್ಲ."

ಬಿಂದುವಾಸಿನಿಗೆ ಸಿಟ್ಟು ಬಂದಿತು.

"ಬರಲಿಕ್ಕಿಲ್ಲ- ಎಂದು ಬಿಟ್ಟರೆ ಆಯಿತೇ? ಅವರು ಇರುವಾಗ ಬೇರೆಯವರಿಗೆ ಮಾಡುವ ಅಧಿಕಾರವಾದರೂ ಎಲ್ಲಿದೆ?— ಇಲ್ಲ, ಇಲ್ಲ- ಹಾಗೆಂದೂ ಶಕ್ಯವಿಲ್ಲ: ಅವರು ಮಾಡಿದ ಹೊರತು...."

"ಹಾಗಾದರೆ ಬೇಡವೇ ಬೇಡ. ಅವರು ಕೆಲಸದ ಮೇಲೆ ಹೋಗಿದ್ದಾರೆ."

"ಓಹೋ! ಇದೆಲ್ಲ ಹಿರಿಯ ಯಜಮಾನಿತಿಯ ಕಾರಸ್ಥಾನ. ಹಾಗಾದರೆ ಅವರೂ ಬರಲಿಕ್ಕಿಲ್ಲ" ಎನ್ನುವಾಗ ಬಿಂದುವಿಗೆ ಕಣ್ಣೀರು ಉಕ್ಕಿಬಂದಿತು. ಪತಿಗೆ ಕಾಣಬಾರದು ಎಂದುಕೊಂಡು ಅವಳು ಎದ್ದು ಹೊರಟು ಹೋದಳು. ಇಂದಿನ ತನಕ ಅನ್ನಪೂರ್ಣೆ ಮೊದಲಾದವರು ಬರುವರೆಂದೇ ತಿಳಿದಿದ್ದಳು. ಈ ಕ್ಷಣದ ವರೆಗೆ ಅವಳು ನಿಶ್ಚಿಂತಳಾಗಿದ್ದಳು. ಪತಿಯ ಮಾತು ಕೇಳಿ ಅವಳ ಆಶೆಗಳೆಲ್ಲ ಬಿಸಿಲುಗುದುರೆಯಂತೆ ಹಾರಿಹೋದವು.

ಬಿಂದುವಾಸಿನಿ ಸುಮ್ಮನೆ ಕುಳಿತುದುದನ್ನು ನೋಡಿ ಎಲೋಕೇಶಿ ನುಡಿದಳು, "ಉಗ್ರಾಣದ ಕೀಲಿಕೈ ಎಲ್ಲಿದೆ? ಸ್ವಲ್ಪ ಕೊಡು. ರಸಗುಲ್ಲ, ಸಂದೇಶಗಳನ್ನು ಇಡಬೇಕಾಗಿದೆ."

ಬಿಂದು ನಿರ್ಲಕ್ಷ್ಯಭಾವದಿಂದ ನುಡಿದಳು.

"ಅಲ್ಲೇ ಎಲ್ಲಾದರೂ ಇಡಬಾರದೇ?"

"ಎಲ್ಲಿ ಇಡಲಿ? ಹೊರಗೆ ಇಟ್ಟರೆ ಮಕ್ಕಳು ಬಿಡುವರೇ?"

"ಹಾಗಾದರೆ ಒಗೆದು ಬಿಡಿರಿ." ಅಸಹನೆಯಿಂದ ನುಡಿದು ಅಲ್ಲಿಂದ ಹೊರಟಳು. ಜಗುಲಿಯ ಮೇಲಿದ್ದ ತಾಯಿ ಕೇಳಿದರು.

"ಮಗೂ, ಬೀಸಲಿಕ್ಕೆ ಗೋದಿಯನ್ನು ಎಷ್ಟು ಕೊಡಬೇಕು?"

ಬಿಂದುವಿನ ಮನಸ್ವಾಸ್ಥ್ಯ ಸರಿಯಾಗಿದ್ದಿಲ್ಲ.

"ಮುದುಕಿಯಾಗಿದ್ದೀ. ಇಷ್ಟೂ ಗೊತ್ತಿಲ್ಲವೇ? ನನಗೇನು ಕೇಳುತ್ತಿಯಮ್ಮಾ?" ಬಿಂದು ತಾಳಿಕೊಳ್ಳಲಾರದೇ ನುಡಿದಳು.

"ಅರರೇ! ಕೇಳಿ ಕೇಳಿ ಇವಳ ಮಾತು! ನನಗೆ ಹೇಗೆ ತಿಳಿಯಬೇಕಮ್ಮಾ ಈ ಮನೆಯ ಕಥೆ!"

ಬಿಂದು ಉತ್ತರ ಕೊಡದೇ ಬೇರೊಂದು ಕೊಠಡಿಗೆ ನಡೆದಳು. ಮನೆಯ ಕೆಲಸದವಳು ಬಂದು ಹೇಳಿದಳು.

"ಅಮ್ಮಾ, ಯಜಮಾನರು ಕರೆಯುತ್ತಾರೆ. ಆ ಬಟ್ಟೆಗೆ........"

"ಅಯ್ಯೋ....ತಿಂದು ಬಿಡಿ ನೀವೆಲ್ಲ ನನ್ನನ್ನು. ಛೀ, ನನ್ನಿಂದಾಗದು" ಬಿಂದುವಿನ ಸಹನೆ ಎಲ್ಲೆ ಮೀರಿತ್ತು. ಸಂದರ್ಭ ತಿಳಿಯದ ಕೆಲಸದಾಕೆ ಗಾಬರಿಯಾಗಿ ಓಡಿಹೋದಳು.

ಸ್ವಲ್ಪ ಹೊತ್ತಿನ ಮೇಲೆ ಸ್ವತಃ ಮಾಧವನೇ ಬಂದ. ಬಿಂದುವಾಸಿನಿ ಸರಸರನೇ ಹೋಗಿ ಅವನ ಮುಂದೆ ನಿಂತು ಕಿರುಚಿದಳು.

"ಹುಂ. ನನ್ನಿಂದಾಗದು, ನನ್ನಿಂಗಾಗದು, ಎಂದು ಸಾವಿರ ಸಲ ಹೇಳಿದೆನಲ್ಲ, ಆಯಿತೆ?"

ಮಾಧವ ದಂಗಾಗಿ ನಿಂತುಬಿಟ್ಟ. ಅವಳೇ ಮುಂದೆ ಹೇಳಿದಳು.

"ಈಗೇನು ಮಾಡುತ್ತೀರಿ ನನ್ನನ್ನು........" ಎಂದು ಮಾತು ಮುಗಿಸುವ ಮೊದಲೇ ಅಳುತ್ತ ಹೊರಟು ಹೋದಳು. ಇತ್ತ ಬಿಸಿಲೇರತೊಡಗಿತ್ತು.

ಬಿಂದು ನಿಷ್ಕಾರಣವಾಗಿ ಎಲ್ಲರ ಮೇಲೆ ರೇಗತೊಡಗಿದ್ದಳು. ಪ್ರತಿಯೊಬ್ಬರ ತಪ್ಪು ಹುಡುಕುತ್ತ ತಿರುಗಾಡುತ್ತಿದ್ದಳು. ಯಾರದೋ ಧೋತರವನ್ನು ಬಿಸಿಲಿನಲ್ಲಿ ಒಣಹಾಕಿದ್ದರು. ಅದರ ಅಂಚು ಬಿಂದುವಾಸಿನಿಯ ಕಾಲಿಗೆ ತಾಗಿತು-ಆಯಿತು. ಸಿಟ್ಟಿನಿಂದ ಉರಿದೆದ್ದು ಆ ಧೋತರವನ್ನೇ ಹರಿದು ಚೂರು ಚೂರು ಮಾಡಿದಳು.

ಹೊರಗೆ ಶತಪಥ ಹಾಕುತ್ತಿದ್ದ ಪುರೋಹಿತ ಒಳಗೆ ಬಂದು ಹೇಳಿದ.

"ಛೆ! ಕಠಿಣ ಪರಿಸ್ಥಿತಿ-ಹೊತ್ತು ಕಳೆಯುತ್ತಿದೆ. ಏನೂ ತಯಾರಿ...."

ಬಿಂದುವಾಸಿನಿ ಮೆಟ್ಟಿಲ ಬಳಿ ನಿಂತುಕೊಂಡು ಕಠೋರ ಸ್ವರದಲ್ಲಿ ನುಡಿದಳು, "ಬಹಳ ಜನರಿದ್ದಮನೆ. ಹೊತ್ತು ಬಹಳವಾಗದಿರುತ್ತದೆಯೋ?"

ಮಾತು ಪೂರೈಸಿ ಬಿಂದು ತನ್ನ ಕೊಠಡಿಗೆ ಹೋಗಿ ಹಾಸಿಗೆಯ ಮೇಲೆ ನಿರ್ಜೀವವಾಗಿ ಬಿದ್ದಳು. ಹತ್ತು ನಿಮಿಷಗಳ ನಂತರ ಅವಳಿಗೆ ಪರಿಚಿತ ಕಂಠದ ಧ್ವನಿ ಕೇಳಿಸಿತು. ಅವಳು ಗಡಿಬಿಡಿಯಿಂದ ಹೊರಗೆ ಹೋಗಿ ನೋಡಿದರೆ ಅನ್ನಪೂರ್ಣೆ ಅಂಗಳದಲ್ಲಿ ನಿಂತಿದ್ದಾಳೆ.

ಬಿಂದುವಿಗೆ ದುಃಖಒತ್ತರಿಸಿ ಬಂದಿತು. ತಲೆಯಮೇಲೆ ಸೆರಗು ಹೊದೆದು ಅನ್ನಪೂರ್ಣೆಗೆ ಕೈಮುಗಿದಳು.

"ಹೊತ್ತು ಹನ್ನೊಂದಕ್ಕೆ ಬಂತಕ್ಕ, ಇನ್ನೆಷ್ಟು ದಿನ ವೈರತ್ವ? ನಾನು ವಿಷ ಕುಡಿದ ಮೇಲೆ ನಿಮಗೆ ಶಾಂತಿ ದೊರಕುವದಿದ್ದರೆ ಮನೆಗೆ ಹೋಗಿ ಬಟ್ಟಲ ತುಂಬ ವಿಷವಿದ್ದರೆ ಕಳಿಸಿಕೊಡಿ."

ಅವಳ ಅಭಿಮಾನಕ್ಕೆ ಧಕ್ಕೆ ಬಂದಿತ್ತು. ಆದರೂ ಸೊಂಟಕ್ಕಿದ್ದ ಕೀಲಿ ಗೊಂಚಲವನ್ನು ಅನ್ನಪೂರ್ಣೆಯ ಕಾಲಬಳಿ ಒಗೆದು ಹೊರಟು ಹೋದಳು

ಮನೆಯೆಲ್ಲ ನೀರವವಾಗಿತ್ತು. ಬಂಧು-ಬಳಗದವರೆಲ್ಲ ಈ ಸನ್ನಿವೇಶ ವನ್ನು ಕುತೂಹಲದಿಂದ ನೋಡುತ್ತಿದ್ದರು. ಅನ್ನಪೂರ್ಣೆ ಒಂದಕ್ಷರ ಕೂಡ ಉಚ್ಚರಿಸದೇ ಕಾಲಬಳಿ ಬಿದ್ದಿದ್ದ ಗೊಂಚಲವನ್ನು ಎತ್ತಿದಳು.

ಸುಮಾರು ಎರಡು ತಾಸುಗಳ ನಂತರ ಮನೆಯಲ್ಲಿ ಬಂದು ಹೋಗು ವವರ ಸಂಖ್ಯೆ ಕ್ರಮೇಣ ಹೆಚ್ಚಾಗತೊಡಗಿತ್ತು. ಊಟದ ಗಡಿಬಿಡಿ, ಬಂದವರಿಗೆ ಆದರಾತಿಥ್ಯ ನೀಡುವಲ್ಲಿ ಮನೆಯ ಜನ ಮಗ್ನರಾದರು. ಬಿಂದುವಾಸಿನಿ ಈ ಮಧ್ಯೆ ಮನಸಾ ಅತ್ತು ಹೃದಯವನ್ನು ಹಗುರ ಮಾಡಿಕೊಂಡಿದ್ದಳು. ಈಗ ಅವಳಿಗೆ ಏನೆನ್ನಿಸಿತೋ ಏನೋ ತಾನು ಕೂಡ ಓಡಾಡತೊಡಗಿದಳು.

ಮನೆಯ ಜವಾನ ಬಂದು ಹೇಳಿದ.

"ಅಮೂಲ್ಯ ಶಾಲೆಯಲ್ಲಿಲ್ಲ."

ಬಿಂದು ಅವನನ್ನೆ ದುರುಗುಟ್ಟಿ ನೋಡಿದಳು. "ಎಂಥ ದಡ್ಡನೋ ನೀನು. ಇಷ್ಟು ಹೊತ್ತಿಗೆ ಯಾರಾದರೂ ಶಾಲೆಯಲ್ಲಿರುತ್ತಾರೇನೊ?"

ಜವಾನ ಹೆದರುತ್ತ ಹೇಳಿದ "ಇಲ್ಲ- ಇಲ್ಲ, ಆದರೆ ಮನೆಯಲ್ಲಿ ಸಹ ಇಲ್ಲ" ಬಿಂದು ಕೂಗಿದಳು.

"ಇಲ್ಲ? ಎಲ್ಲಿ ಹೋದ? ಯಾವ ನೀಚರ ಜೊತೆ ಚಿಣಿ-ಫಣಿ ಆಡುತ್ತ ಓಣಿ ಓಣಿ ತಿರುಗುತ್ತಿದ್ದಾನೋ ಏನೋ? ಈಗ ಯಾಕ ಹೆದರಿಕೆ

ಇದೆ ಅವನಿಗೆ–ಅಂಕೆ ಇಲ್ಲದೇ ಹಾಳಾಗಿ ಹೋಗುತ್ತಾನೆ. ಆಡುತ್ತ ಆಡುತ್ತ ಅವನ ಕಣ್ಣು ಹೋದಾಗ ಹಿರಿಯ ಯಜಮಾನಿಗೆ ಆಗ ಬುದ್ಧಿ ಬರಬಹುದು ! ಹುಂ–ನಡೆ–ಎಲ್ಲಿದ್ದಾನೋ ಹುಡುಕಿಕೊಂಡು–ಎಳೆದು ತಾ ಅವನನ್ನು."

ಒಂದು ತಾಸಿನ ನಂತರ ಆ ಮನೆಯಾಳು ತಿರುಗಿ ಬಂದು ಹೇಳಿದ.

" ಅಮೂಲ್ಯ ಮನೆಯಲ್ಲಿದ್ದಾರೆ. ಆದರೆ ಬರುವದಿಲ್ಲ "

ಬಿಂದುವಿಗೆ ಆಶ್ಚರ್ಯವಾಯಿತು.

"ಅಂ ? ಬರುವದಿಲ್ಲ ?............ನಾನು ಕರೆದೆ ಎಂದು ಹೇಳಬೇಕಾಗಿತ್ತು.."

" ಹಾಗೆಯೇ ಹೇಳಿದೆ..........."

ಒಂದು ಕ್ಷಣ ಸುಮ್ಮನಿದ್ದು ಬಿಂದು ನುಡಿದಳು.

" ಇದರಲ್ಲಿ ಅವನ ತಪ್ಪು ಇಲ್ಲ—ತಾಯಿ ಇದ್ದಂತೆ ಮಗ. ಇಂಥ ತಾಯಿ ಮಕ್ಕಳ ಮೋರೆ ನೋಡದಿರುವದೇ ಲೇಸು—"

ಕತ್ತಲೆಯಾದ ಕೂಡಲೇ ಅನ್ನಪೂರ್ಣೆ ಮನೆಗೆ ಹೋಗಲು ಹೊರಟು ನಿಂತಳು. ಮಾಧವ ಅವಳನ್ನು ಮುಟ್ಟಿಸಿ ಬರಲು ಹೊರಟ.

ಬಿಂದುವಾಸಿನಿ ಮಾಧವನನ್ನು ತಡೆದು ಹೇಳಿದಳು

" ಮುಟ್ಟಿಸಿ ಬರಲೇನೋ ಹೊರಟಿದ್ದೀರಿ ಆದರೆ ಅವರು ಒಂದು ಹನಿ ನೀರು ಸಹ ಕುಡಿಯಲಿಲ್ಲವೆಂದು ನಿಮಗೆ ಗೊತ್ತಿದೆಯೇ ?"

"ಗೊತ್ತು ಮಾಡಿಕೊಳ್ಳುವದು ನಿನ್ನ ಕೆಲಸ-ನನ್ನದಲ್ಲ ಅದು. ಕೆಲಸ ಕೆಟ್ಟು ಹೋಗುತ್ತದೆಂದು ಕರಕೊಂಡು ಬಂದೆ. ಮುಟ್ಟಿಸಲು ಹೋಗುತ್ತಿದ್ದೇನೆ.''

"ಹುಂ ತಿಳಿಯಿತು. ನೀವೂ ಕೂಡ ಅಕ್ಕನ ಗುಂಪಿನಲ್ಲಿ ಸೇರಿರುವಿರಿ."

ಮಾಧವ ಈ ಮಾತಿನತ್ತ ಲಕ್ಷ್ಯಕೊಡದೇ ಅತ್ತಿಗೆಗೆ ಹೇಳಿದ.

"ನಡೆಯಿರಿ ಅತ್ತಿಗೆ.''

ಬಿಂದುವಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಎಲ್ಲವೂ ತನ್ನ ಮನಸ್ಸಿನ ವಿರುದ್ಧ ಸಾಗುತ್ತಿದೆ ಎಂದು ತಿಳಿಯತವಳಿಗೆ. ಕಣ್ಣಿನಿಂದ ನೀರು ಸೂಸುತ್ತಿತ್ತು. ಉಕ್ಕಿ ಬಂದ ದುಃಖ, ಮೇಲಾಗಿ ಮಾಧವ ಕೊಟ್ಟ ಉತ್ತರ ಅವಳಿಗೆ ಬಾರಕೋಲಿನಿಂದ ಹೊಡೆದಂತಾಯಿತು. ಇವೆರಡರಿಂದ ತುಂಬ

ಘಾಸಿಗೊಂಡಿತವಳ ಮನಸ್ಸು. ಸಾವಕಾಶವಾಗಿ ಹೆಜ್ಜೆ ಹಾಕಿ ಅಡಿಗೆ ಮನೆಯ ಕಡೆಗೆ ಹೋದಳು. ಅಲ್ಲೇ ಮೂರ್ಛೆ ಬಂದು ಬಿದ್ದಳು.

ಅಡಿಗೆ ಮನೆಯ ಗೊಂದಲ ಅಂಗಳದಲ್ಲಿದ್ದ ಮಾಧವ ಅನ್ನಪೂರ್ಣೆಗೆ ಕೇಳಿಸಿತು.

"ಏನಾಯಿತು ! ಕೊಂಚ ನೋಡೋಣವೇ?" ಅನ್ನಪೂರ್ಣೆ ಕೇಳಿದಳು. ಮಾಧವ ಮಾನಸನ್ನು ಬಿಗಿ ಹಿಡಿದು "ನೋಡುವ ಅಗತ್ಯವಿಲ್ಲ" ವೆಂದು ಉತ್ತರ ಕೊಟ್ಟ—ಅವನ ಮುಖ ನಿರ್ವಿಕಾರವಾಗಿತ್ತು. ಇಬ್ಬರೂ ಮುಂದೆ ಸಾಗಿದರು.

ಅನ್ನಪೂರ್ಣೆ ಬಿಂದುವಾಸಿನಿಯರ ಜಗಳ ಇಷ್ಟು ದೂರಕ್ಕೆ ಹೋಗಿದೆ ಯೆಂದು ಯಾರಿಗೂ ಗೊತ್ತಿರಲಿಲ್ಲ. ಇಂದು ಅದಕ್ಕೆ ಮೂರ್ತಸ್ವರೂಪ ದೊರೆತಿತ್ತು.

ಮರುದಿನ ಮನೆಯ ಹೆಂಗಸರೆಲ್ಲ ಹರಟುತ್ತಿರುವಾಗ ಎಲೋಕೇಶಿ ಹೇಳಿದಳು.

"ಜಗಳವಾದದ್ದು ಇಬ್ಬರಲ್ಲಿ. ಈ ಹುಡುಗನಿಗೇನಮ್ಮ ಧಾಡಿ, ಈ ಬದಿ ಬಂದು ಹೋಗುವದಕ್ಕೆ? ಪಾಪ ಬಿಂದುವಾಸಿನಿ ಅಷ್ಟು ಪ್ರೇಮದಿಂದ ಸಾಕಿದ ಮಗು ಈ ರೀತಿ ಹಾಳಾಗಿ ಹೋಗುತ್ತಾನೆಂದರೆ ಯಾರಿಗೆ ಕೆಡಕೆನಿಸ ದಿರಲಾರದು ? ಆದರೆ ನಾನೆಷ್ಟೋ ಹುಡುಗರನ್ನು ಕಂಡಿದ್ದೇನಮ್ಮ ಇಂಥ ಹರಾಮೀ ಹುಡುಗನನ್ನು ನಾನೆಲ್ಲೂ ನೋಡಿಲ್ಲ !"

ಬಿಂದುವಾಸಿನಿ ಕೇವಲ ಅವಳ ಕಡೆ ದೃಷ್ಟಿ ಬೀರಿದಳು. ಆಕೆಯ ಕಣ್ಣು ಗಳು ಕಾಂತಿಹೀನವಾಗಿದ್ದವು. ಮೋರೆ ಬಾಡಿತ್ತು.

ಎಲೋಕೇಶಿ ಮತ್ತೇ ನುಡಿದಳು.

"ಅಮ್ಮಾ, ಬಿಂದೂ, ನಿನಗೆ ಮಗು ಬೇಕಾದರೆ ನನ್ನ ನರೇಂದ್ರನಾಥ ನನ್ನು ತೆಗೆದುಕೊಳ್ಳಮ್ಮಾ. ಎಂಥಹ ಮುದ್ದು ಮಗು ಅದು ! ಹೇಳಿದ ಮಾತು ತೆಗೆದು ಹಾಕಲಾರ, ಆಹಾ ! ಏನು ಅಜ್ಞಾಧಾರಕ ! ಅಂಥ ಮಕ್ಕಳೇ ವಿರಳ ಈ ಕಾಲದಲ್ಲಿ !"

ಆದರೂ ಸುಮ್ಮನಿದ್ದಳು ಬಿಂದು. ಬಿಂದುವಾಸಿನಿಗೆ ತಾಯಿಯಾಗುವ ಲಕ್ಷಣವಿಲ್ಲವೆಂದು ಎಲೋಕೇಶಿ ಎಂದೋ ಕಂಡುಕೊಂಡಿದ್ದಳು. ಜಮೀನ ದಾರನ ಒಬ್ಬಳೇ ಮಗಳು. ಆಸ್ತಿಯೆಲ್ಲ ಇವಳದೇ. ಆದಷ್ಟು ಅಮೂಲ್ಯನನ್ನು

ಅವಳ ಮನಸ್ಸಿನಿಂದ ಅಳಿಸಿ, ತನ್ನ ಮಗನ ಮೂರ್ತಿ ಅವಳ ಕಣ್ಣು ಮುಂದೆ ಕುಣಿಯುವಂತೆ ಮಾಡಬೇಕೆಂದು ಎಲೋಕೇಶಿ ಬಹಳ ದಿನಗಳಿಂದ ಎಣಿಕೆ ಹಾಕಿಕೊಂಡಿದ್ದಳು.

"ಇದೆಂಥ ಮಾತಮ್ಮ, ಅಮೂಲ್ಯನೆಂದರೆ ಪಂಚಪ್ರಾಣ ಅವಳಿಗೆ. ಅವಳ ನರನರಗಳಲ್ಲಿ ತುಂಬಿ ಕೊಂಡಿದ್ದಾನವನು. ಪಾಪ ಮೊದಲೇ ದುಃಖವಾಗಿದೆ ಗಾಯದ ಮೇಲೆ ಬರೆ ಎಳೆಯ ಬೇಡಿರಮ್ಮ."

ಬಿಂದುವಿನ ತಾಯಿ ಮಗಳ ವ್ಯಥೆ ಕಾಣಲಾರದೇ ನುಡಿದಳು. ಎಲೋಕೇಶಿಯ ಮುಖ ಪೆಚ್ಚು ಬಿದ್ದಿತು. ಮುಂದೆ ಮಾತನಾಡುವ ಗೋಜಿಗೆ ಆಕೆ ಹೋಗಲಿಲ್ಲ.

ಸಂಜೆಯಾಯಿತು. ಕೆಲಸದವರೊಂದಿಗೆ ಎಂದೂ ಮಾತಾಡದಿದ್ದ ಬಿಂದು ವಾಸಿನಿ ಇಂದು ಅಡಿಗೆಮನೆಗೆ ಬಂದು ಅಡಿಗೆಯವಳೊಂದಿಗೆ ಮಾತಾಡುತ್ತ ಕುಳಿತಿದ್ದಳು. ಅವಳಿಗೇನಾಗಿತ್ತೊ ಏನೋ ಬಡ ಬಡ ಮಾತಾಡುತ್ತ ತನ್ನ ಪಕ್ಷ ಸಮರ್ಥಿಸುತ್ತ ಕುಳಿತ್ತಿದ್ದಳು.

"ನೀನೇ ಹೇಳಮ್ಮ—ನೀನೇ ಎಲ್ಲ ನೋಡುತ್ತ ನಿಂತಿದ್ದೆ. ಏನು ಹೇಳಿದ್ದೆ ನಾನು? ಸರಿ—ಮಧ್ಯದಲ್ಲಿ ಮಗುವಿಗೆ ರೂಪಾಯಿ ಕೊಟ್ಟಿರು ವಿರಾ ಎಂದು ಕೇಳಿದ್ದೆ. ಯಾರು ಕೇಳುವದಿಲ್ಲ? ನೀನೇ ಹೇಳು. ಮಕ್ಕಳಿಗೆ ರೂಪಾಯಿ ಕೊಟ್ಟರೆ ಮಕ್ಕಳು ಹಾಳಾಗುತ್ತಾರೆ. ಇದು ನಿನಗೂ ಗೊತ್ತಿದೆ. ಸಾಯಲಿ ಅದು. ಮಗು ಹಠಮಾಡಿದ, ಅದಕ್ಕೇನೆ ಕೊಟ್ಟೆ ಎಂದರಾಗು ತ್ತಿರಲಿಲ್ಲವೇ? ವ್ಯಥಾ ಇಷ್ಟು ಸಣ್ಣ ಮಾತು ಜಗಳಕ್ಕೆ ಕಾರಣವಾಯಿತು. ಇಷ್ಟು ಸಣ್ಣ ಮಾತಿಗೆ ಆಣೆ ತೆಗೆದುಕೊಂಡರೆಂದರೇನು? ಊಟ ಮಾಡು ವದಿಲ್ಲವೆಂದರೇನು? ಯಾರಾದರೂ ಹೀಗೆ ಮಾಡುತ್ತಾರೆಯೆ? ನೀನೇ ಹೇಳಮ್ಮ, ನಾಲ್ಕು ಮನೆ ತಿರುಗಿದವಳು ನೀನು – ಯಾರದು ತಪ್ಪೆಂದು ನೀನೇ ಹೇಳು. ಮನೆಗೊಬ್ಬನೇ ಮಗ. ಅವನ ಮೇಲೆ ಆಣೆ! ಶಿವಶಿವ! ಶತ್ರುಗಳಾದರೂ ಇಷ್ಟು ಹೊತ್ತಿಗೆ ಕ್ಷಮಿಸುತ್ತಿದ್ದರು. ....ಕ್ಷಮಿಸುವದೇನಿದೆ? ತಪ್ಪು ಅವರದೇ........"

ಅಡಿಗೆಯವಳಿಗೆ ಸ್ವಭಾವತಃ ಮಾತು ಕಡಿಮೆ. ಮೇಲಾಗಿ ಎಂದೂ ಮಾತಾಡದಿದ್ದ ಬಿಂದುವಾಸಿನಿ ಇಂದು ಮನೆಯ ಸುದ್ದಿ ತೆಗೆದದ್ದು ಕಂಡು

ಅವಳಿಗೆ ಆಶ್ಚರ್ಯವಾಗಿತ್ತು. ಆಕೆ ಮಾತಾಡಲಿಲ್ಲ. ಬಿಂದುವಾಸಿನಿಯ ಕಣ್ಣು ಗಳಿಂದ ನೀರು ಒಂದೇ ಸವನೆ ಹರಿಯುತ್ತಿತ್ತು. ಒಮ್ಮೆಲೆ ಸೆರಗಿನಿಂದ ಒರಸಿ ಕೊಂಡು ಮುಂದೆ ಅವಳೇ ಹೇಳಿದಳು.

"ಇರಲಿ, ಸಿಟ್ಟಿನಿಂದ ಯಾರೂ ಆಣೆ ತೆಗೆದುಕೊಳ್ಳಬಹುದು. ಆದರೆ ನಿಜಕ್ಕೂ ಒಂದು ಹನಿ ನೀರು ಕೂಡ ಮುಟ್ಟಬಾರದಿತ್ತೇ? ಮಗುವನ್ನು ಕೂಡ ಕಳಿಸಿಕೊಡಲಿಲ್ಲ. ಇವೆಲ್ಲ ಹಿರಿಯುವರ ಕೃತ್ಯಗಳೇನು? ಸಣ್ಣ ಮಕ್ಕಳು ಕೂಡ ಜಗಳಾಡಿದುದನ್ನು ಮರೆಯುತ್ತಾರೆ.ಆದರೆ ...ಹೌದು,ನಾನು ಚಿಕ್ಕವಳು. ನನಗೆ ಬುದ್ಧಿ ಕಡಿಮೆ. ಆದರ ಅವರಿಗೆ ಅಷ್ಟು ತಿಳಿಯಬಾರದಿತ್ತೇ? ನಾನೇ ಅವರ ಮಗಳಾಗಿದ್ದರೆ ಆಗ ಏನು. ಮಾಡುತ್ತಿದ್ದರವರು? ನಾನು ಸಹ ಅವರ ಹೆಸರು ಇನ್ನು ಮುಂದೆ ಉಚ್ಚರಿಸಲಿಕ್ಕಿಲ್ಲ.." ಅಡಿಗೆಯವಳು ಈಗಲೂ ಮಾತಾಡ ಲಿಲ್ಲ. ಬಿಂದು ಹೇಳತೊಡಗಿದಳು. "ಅವರಿಗೆ ಮಾತ್ರ ಆಣೆ ಹಾಕಲಿಕ್ಕೆ ಬರುತ್ತದೆ. ನನಗೆ ಬರುವದಿಲ್ಲ ಎಂದುಕೊಂಡಿರೇನು? ನಾನು ನಾಳೆಯೇ ಅವರ ಮನೆಗೆ ಹೋಗಿ 'ನನಗೊಂದು ವಿಷದ ಬಟ್ಟಲುಕೊಡಿ — ಕೊಡದಿದ್ದರೆ ಮಗುವಿನ ಆಣೆ,ನಿಮ್ಮಾಣೆ' ಎಂದು ಹೇಳಿದರೆ ಆಗ....ಆಗ ಏನು ಮಾಡಿಯಾರು ಅವರು? ಈಗ ಐದಾರು ದಿನ ಸುಮ್ಮನೆ ಕುಳಿತಿದ್ದೇನೆ ನಿಜ, ಎರಡು ದಿನ ಕಾಯುತ್ತೇನೆ........ಇಲ್ಲದಿದ್ದರೆ ಸರಿ. ನಾನೇ ವಿಷ ಕುಡಿದು, 'ಅಕ್ಕ ಕಳಿಸಿದರು ನಾನು ಕುಡಿದೆ' ಎಂದು ಹೇಳಿ ಸತ್ತರೆ ಆಗ........ಆಗ ಇವರ ಮೋರೆ ನಾಲ್ಕು ಜನರಲ್ಲಿ ಎದ್ದು ಕಾಣಬಹುದಲ್ಲವೇ? ಆಗಲಾದರೂ ಅವರಿಗೆ ಬುದ್ಧಿ ಬರದೇ ಇರಲಿಕ್ಕಿಲ್ಲ..........."

ಅಡಿಗೆಯವಳು ಈಗ ಮಾತ್ರ ಹೆದರಿದಳು. ಮೃದುಸ್ವರದಲ್ಲಿ ಸಮಾ ಧಾನ ಪಡಿಸಲು ಹೇಳಿದಳು.

"ಛೀ ಅಮ್ಮಾ, ಇಂತಹ ಮಾತಾಡಬಾರದು. ಈ ರೀತಿ ವಿಚಾರ ಕೂಡ ಮಾಡಬಾರದು. ತಂಟೆ ತಕರಾರು ಮನೆಯಲ್ಲಿ ಎಷ್ಟು ದಿನ ಉಳಿಯ ಬಲ್ಲವು? ಅಕ್ಕ-ತಂಗಿಯ ಜಗಳವೆಂದರೇನೇ ಹಾಗೆ.ಎರಡು ದಿನ ಜಗಳ, ನಾಲ್ಕು ದಿನ ಮೊದಲಿನಗಿಂತ ಹೆಚ್ಚು ಪ್ರೀತಿ ಮಮತೆ....ಅವರು ಎಂದೂ ನಿಮ್ಮನ್ನು ಬಿಟ್ಟು ಇರಲಾರರು. ಮಗುವಂತೂ....ಇಷ್ಟು ದಿನಗಳಲ್ಲೇ ನಿಜವಾಗಿ ಆತ ಓಡಿ ಬರಬೇಕಾಗಿತ್ತು."

"ಅದಕ್ಕೆಂದೇ ಹೇಳುತ್ತಿದ್ದೇನೆ. ನಿಜವಾಗಿಯೂ ಅವರು ಆತನನ್ನು ಹೊಡೆದು-ಬಡಿದು ಹೆದರಿಸಿ ಇಟ್ಟಿದ್ದಾರೆ. ಒಂದು ರಾತ್ರಿ ಕೂಡ ನನ್ನನ್ನು ಬಿಟ್ಟು ಇರದ ಮಗು ಈಗ ಐದು ದಿನ ನಾಲ್ಕು ರಾತ್ರಿ ಕಳೆದರೂ ಪತ್ತೆ ಇಲ್ಲ ವೆಂದರೇನು? ಛೇ! ಇನ್ನೂ ಆಕೆಯ ಮುಖ ಕೂಡ ನೋಡಲಿಕ್ಕಿಲ್ಲ ನಾನು...."

ಅಡಿಗೆಯವಳು ಬಿಂದುವಾಸಿನಿಯ ಬಳಿ ಹೇಳದೇ ಇದ್ದ ಒಂದು ಘಟನೆ ಇತ್ತು. ಈಗ ಅವಳಿಗೆ ತಡೆಯಲಾರದಾಯಿತು. ಕೂತಲ್ಲಿಂದ ಎದ್ದು ಮೊಣಕೈ ಬಳಿ ಆದ ಕಚ್ಚಿದ ಗುರುತನ್ನು ತೋರಿಸುತ್ತ ನುಡಿದಳು.

"ಇಲ್ಲಿ ನೋಡಿ ಅಮ್ಮ–ಗಾಯ ಇನ್ನೂ ಸರಿಯಾಗಿ ಮಾದಿಲ್ಲ. ಆ ದಿನ ನಿಮಗೆ ಮೂರ್ಛೆ ಬಂದಾಗ ನಡೆದ ಘಟನೆ ನಿಮಗೆ ಗೊತ್ತಿಲ್ಲ. ಆ ದಿನ ಮಗು ಎಲ್ಲಿಂದಲೋ ಏನೋ ಓಡೋಡಿ ಬಂದ. ಅವನು ಬಂದ ತರಹ ನೋಡಿ ಗೇಟು ದಾಟಿದ ಯಜಮಾನಿ ಕೂಡ ಅವನ ಹಿಂದೆ ಹಿಂದೆ ಓಡೋಡಿ ಬಂದರು.

ಅವನು ಅಳುತ್ತಿದ್ದ ರೀತಿ ಆಗ ನೀವು ಕಾಣಬೇಕಾಗಿತ್ತು. ಸಾಯುವ ದೆಂದರೇನು– ಮರಣವೆಂದರೇನು ಎಂದು ಇನ್ನು ಕಾಣದ ಮಗು ನಿಮ್ಮ ಮೈಮೇಲೆ ಹೊರಳಾಡುತ್ತ, "ಚಿಕ್ಕಮ ಸತ್ತರು" ಎಂದು ಒಂದೇಸವನೆ ಗೋಳೋ ಎಂದು ಅತ್ತ. ನಿಮಗೆ ತಲೆಗೆ ನೀರು ಬಡಿಯಲು ಬಂದ ನನ್ನನ್ನು ದೂಡಿದ. ಎಳೆದು ಹಿಡಿದುಕೊಳ್ಳೋಣವೆಂದು ಕೈಹಿಡಿದು ಎಳೆದಾಗ ಕಚ್ಚಿಬಿಟ್ಟ. ಇದೋ, ಹಲ್ಲಿನ ಗುರ್ತು ಇನ್ನೂ ಇದೆ. ಇಲ್ಲಿ ನೋಡಿ, ನಿಮ್ಮ ಪತಿ ಮತ್ತು ಜವಾನರಿಬ್ಬರಿಗೂ ಆತನನ್ನು ಹೊತ್ತುಕೊಂಡು ಹೊರಗೆ ಒಯ್ಯುವ ತನಕ ಅವರಿಗೆ ಸಾಕು ಸಾಕಾಯಿತು."

ಬಿಂದು ಆತ್ಮೀಯತೆಯಿಂದ ಅಡಿಗೆಯವಳತ್ತ ದೃಷ್ಟಿ ಬೀರಿದಳು. ಆಕೆ ಹೇಳಿದ ಘಟನೆ ಅವಳು ಮನಸ್ಸಿನಲ್ಲೇ ತಿರುವಿ ಹಾಕುತ್ತಿದ್ದಳು. ಬಳಿಕ ನೀಳವಾಗಿ ಉಸುರ್ಗರೆದು ಸಾವಕಾಶವಾಗಿ ತನ್ನ ಕೋಣೆಗೆ ಹೊರಟುಹೋದಳು.

೪–೬ ದಿನಗಳ ನಂತರ ಬಿಂದುವಿನ ತಾಯಿ ತಂದೆ ಇತ್ಯಾದಿ ಜನರು ಹೋಗುವ ಮುನ್ನಾದಿನ ಬಿಂದುವಾಸಿನಿ ಅರೆ ಮೂರ್ಛೆ ತಿಳಿದೆದ್ದು– ಮಂಚದ ಮೇಲೆ ಒರಗಿದ್ದಳು. ಕೆಲಸದಾಕೆ ಕೋಣೆಯಲ್ಲಿ ಕಸಗುಡಿಸುತ್ತಿದ್ದಳು. ಬಿಂದು ಸನ್ನೆಮಾಡಿ ಆಕೆಯನ್ನು ಸಮೀಪಕ್ಕೆ ಕರೆದು ಮೃದು ಸ್ವರದಲ್ಲಿ ಕೇಳಿದಳು.

"ಅಕ್ಕ ಬಂದಿದ್ದಾರೆಯೇ?"

ಕೆಲಸದವಳು ಹೇಳಿದಳು, "ಇಲ್ಲಮ್ಮ, ನಾವು ಇಷ್ಟುಜನರಿದ್ದೇವೆ. ಅವರಿಗೇಕೆ ಸುಮ್ಮನೆ ಕಷ್ಟ......"

ಬಿಂದು ಒಂದು ಕ್ಷಣ ಸುಮ್ಮನಿದ್ದು ಹೇಳಿದಳು.

"ಇದೇ ನಿಮ್ಮಲ್ಲಿರುವ ದೊಡ್ಡ ದೋಷ. ಎಲ್ಲದರಲ್ಲಿಯೂ ತಲೆಹಾಕಲು ಹೋಗುತ್ತೀರಿ ನೀವು. ಬಳಿಕ ನೋಡಿದರೆ ಎಲ್ಲಿಯೂ ಏನೂ ಇಲ್ಲ. ಈ ರೀತಿ ನಿಮ್ಮದು. ಹೀಗೆ ಮಾಡಿ ಮಾಡಿ ನೀವು. ಒಂದು ದಿನ ...... ಅದಿರಲಿ ಆ ದಿನ, ನೋಡಲಿಲ್ಲವೇ, ಪೂಜೆಯ ದಿನ? ನೀವೆಲ್ಲ ಇರಲಿಲ್ಲವೇ? ಎಲ್ಲರೂ ಕೈಕಟ್ಟಿ ಕೊಂಡು ಕುಳಿತುಬಿಟ್ಟದ್ದಿರಿ. ಅಕ್ಕ ಬರುವ ತನಕ ಏನು ಮಾಡುತ್ತಾ ಇದ್ದೀರಿ ನೀವು? ನೀವೆಲ್ಲಿ, ಅವರಲ್ಲಿ, ಅವರ ಕಾಲ ಬೆರಳಿನ ಉಗುರಿನಷ್ಟು ಯೋಗ್ಯತೆ ಇಲ್ಲ ನಿಮ್ಮಲ್ಲಿ— ಮಾಡುತ್ತಾರಂತೆ! ಹುಂ! ಮಾಡಿರಿ! ಮಾಡಿರಿ".

ಬಿಂದುವಿನ ತಾಯಿ ಮಗಳ ಕೋಣೆ ಹೊಕ್ಕು ಹೇಳಿದರು.

"ಮಗೂ, ನೀನೂ ಕೂಡ ಬಾ ಅಲ್ಲ ನಮ್ಮ ಜೊತೆ? ಎರಡು ದಿನ ಸುಖವಾಗಿ ಕಳೆ. ನಿನ್ನ ಗಂಡ ಕೂಡ ಹಾಗೆಯೇ ಹೇಳಿದರು."

"ನಾನು ಹೋಗುವದು ಹೋಗದಿರುವದು ಅವರ ಸೂಚನೆಯ ಪ್ರಕಾರ ಹೌದು, ನಿಜ. ಆದರೆ ಅವರು ಹೇಳಿದರು ಎಂದ ಕೂಡಲೇ ಹೊರಟು ಬಿಡುವದೇ? ನನ್ನ ವೈರಿಯ ಆಜ್ಞೆಯ ಹೊರತಾಗಿ ನಾನು ಹೇಗೆ ಬರಲಿ?"

ತಾಯಿಗೆ ಅವಳ ಮಾತಿನರ್ಥವಾಯಿತು. ಆದರೂ ನುಡಿದಳು. "ನಿನ್ನ ಅಕ್ಕನ ಮಾತಲ್ಲವೇ ನೀನು ಹೇಳುವದು? ಬಿಡು–ಬಿಡು. ಮನೆ ಬೇರೆ ಬೇರೆ ಯಾದ ಮೇಲೆ ಇದೆಲ್ಲ ಏಕೆ?"

ಬಿಂದು ತಲೆಯಲ್ಲಾಡಿಸುತ್ತ ನುಡಿದಳು.

"ಛೀ, ಛೀ, ಹಾಗೆಂದೂ ಇಲ್ಲ. ಜೀವಂತ ಇರುವತನಕ, ಬೇಕಾದರೆ ಎಲ್ಲಿಯೇ ಇರಲಿ, ಏನೇ ಮಾಡಲಿ, ಅವರು ಅವರೇ. ನಾನು ಏನೂ ಮಾಡಿದರೂ ಅವರ ಆಜ್ಞೆಯ ಹೊರತಾಗಿ ಎಂದೂ ಬರಲಿಕ್ಕಿಲ್ಲಮ್ಮಾ. ಇಲ್ಲದಿದ್ದರೆ ಭಾವನವರಿಗೂ ಸಿಟ್ಟು ಬರದಿರುತ್ತದೆಯೇ?"

ಹೊರಗೆ ನಿಂತು ಸಂವಾದ ಕೇಳುತ್ತಿದ್ದ ಎಲೋಕೇಶಿ ಇದೇ ಸಮಯದಲ್ಲಿ ಬಿಂದುವಿನ ಕೋಣೆ ಪ್ರವೇಶಿಸಿ ಹೇಳದಳು.

"ಹೋಗಮ್ಮ, ನಾನು ಹೇಳುತ್ತೇನೆ ಹೋಗು!"

ಬಿಂದು ಅವಳಮಾತಿನ ಕಡೆಗೆ ಲಕ್ಷವನ್ನೇ ಕೊಡಲಿಲ್ಲ. ತಾಯಿ ಹೇಳಿದರು. "ಹಾಗಾದರೆ ಆಳನ್ನು ಕಳಿಸಿ......"

ಬಿಂದು ಆಶ್ಚರ್ಯದಿಂದ ಕೇಳಿದಳು, "ಆಳನ್ನು? ಇದು ಮತ್ತೂ ಹಾಳು." ನಾನವರ ಮನಸ್ಸನ್ನು ಬಲ್ಲೆ ಅಮ್ಮ- ಬಾಯಿಂದ 'ಹೋಗು' ಎಂದು ಹೇಳಿ ಕಳಿಸಬಹುದು- ಮೇಲಾಗಿ ಉಪ್ಪುಕಾರ ಹಚ್ಚಿ ಭಾವನರಿಗೆ ಜೇರೊಂದನ್ನೇ ಹೇಳಬಹುದು!— ಇಲ್ಲಮ್ಮ, ನಾನು ಬರುವದಿಲ್ಲ. ನೀವು ಹೋಗಿ."

ಬಿಂದುವಿನ ನೆಂಟರಿಷ್ಟರು ತಾಯಿ-ತಂದೆ ಎಲ್ಲರೂ ಹೊರಟು ಹೋದರು. ಮನೆ ನಿರ್ಜೀವವಾಗಿತ್ತು. ಸ್ಮಶಾನಶಾಂತತೆ ಮನೆಯನ್ನೆಲ್ಲ ಆವರಿಸಿತ್ತು. ಮಕ್ಕಳ ಗಲಾಟೆಯಿಲ್ಲ- ಯಾರು ಮಾತಾಡುವದಿದ್ದರೂ ಕೂಡ ಸಣ್ಣ ಧ್ವನಿಯಲ್ಲೇ. ಕೆಳಗಿನ ಭಾಗದಲ್ಲಿ ಎಲ್ಲೋ ಕೇಶಿ ಇರುತ್ತಿದ್ದಳು. ಅಟ್ಟದ ಮೇಲಿನ ಒಂದು ಕೋಣೆ ಬಿಂದುವಾಸಿನಿಯದಾಗಿತ್ತು. ಉಳಿದೆಲ್ಲ ಕೋಣೆಗಳು ಬರಿದಾಗಿದ್ದವು. ಒಂದು ಬಗೆಯ ಚೀಂಕಾರವು ಮನೆಯಲ್ಲೆಲ್ಲ ತುಂಬಿತ್ತು. ಬಿಂದುವಾಸಿನಿ ಬಾಡಿದ ಮನಸ್ಸಿನಿಂದ ಕೋಣೆಯಿಂದ ಕೋಣೆ ತಿರುಗುತ್ತಿದ್ದಳು. ಹೀಗೆಯೇ ತಿರುಗುತ್ತ ಒಂದು ಕೋಣೆಯ ಎದುರಿಗೆ ಬಂದು ನಿಂತಳು. ತನ್ನ ಭಾವೀ ಸೊಸೆಗಾಗಿ ಈ ಕೋಣೆಯನ್ನು ಹೇಳಿ ಮಾಡಿಸಿದ್ದಳವಳು. ಈಗ ಆ ಬರಿದಾದ ಕೋಣೆ ಕಂಡು ಅವಳ ಹೃದಯದಲ್ಲಿ ಬಿರುಗಾಳಿ ಎದ್ದಂತಾಯಿತು. ಎಷ್ಟೇ ಪ್ರಯತ್ನಮಾಡಿದರೂ ಆಕೆಯಿಂದ ಉಕ್ಕಿಬರುವ ಕಣ್ಣೀರನ್ನು ತಡೆಯಲಾಗಲಿಲ್ಲ. ಹಾಗೆಯೇ ಮಹಡಿಯನ್ನು ಇಳಿಯುತ್ತಿರುವಾಗ ಮೇಲೇರುವ ಪತಿಯನ್ನು ಕಂಡು ಒಮ್ಮೆಲೆ ಕೇಳಿದಳು.

" ಅಯ್ಯೋ, ಈಗ ಏನಾಗಬಹುದು ಎನ್ನುತ್ತೀರಿ ?"

ಮಾಧವನಿಗೆ ಹಿಂದು ಮುಂದು ತಿಳಿಯಲಿಲ್ಲ. " ಎಲ್ಲಿ " ಎಂದ.

ಬಿಂದು ಉತ್ತರವನ್ನೇ ಕೊಡಲಿಲ್ಲ. ನಿಟ್ಟುಸಿರುಬಿಟ್ಟು ಕಣ್ಣೊರಸಿಕೊಂಡು ಕೂಡಲೇ ನುಡಿದಳು. "ಇಲ್ಲ, ಇಲ್ಲ. ಏನೂ ಇಲ್ಲ, ನೀವು ಹೋಗಿ."

ಮರುದಿನ ಮಾಧವ ಜಗುಲಿಯ ಬದಿಯಲ್ಲಿದ್ದ ಕೋಣೆಯಲ್ಲಿ ಕೆಲಸ ಮಾಡುತ್ತ ಕುಳಿತ್ತಿದ್ದ. ಎಲ್ಲಿಯೋ ಹೋಗಿದ್ದ ಬಿಂದು ಸರಸರನೆ ಅವನ ಕೋಣೆಯನ್ನು ಹೊಕ್ಕಳು. ಉಕ್ಕಿ ಬರುತ್ತಿದ್ದ ಅಳುವನ್ನು ತಡಕೊಂಡಂತ್ತಿತ್ತು ಅವಳ ಮುಖ. ಪ್ರಶ್ನಾರ್ಥಕ ದೃಷ್ಟಿಯಿಂದ ಮಾಧವ ಅವಳತ್ತ ನೋಡಿದ.

"ಭಾವನವರು ನೌಕರಿ ಮಾಡುತ್ತಾ ಇದ್ದಾರೆಯೇ?"

"ಹುಂ" ಎಂದಿಷ್ಟೇ ನುಡಿದು ಮಾಧವ ಕೈಯಲ್ಲಿದ್ದ ಕಾಗದದಕಡೆ ದೃಷ್ಟಿ ಹಾಯಿಸಿದ.

"ಹುಂ, ಏನು? ಇದೇನು, ಅವರದೇನು ನೌಕರಿ ಮಾಡುವ ವಯಸ್ಸೇ?"

ಮಾಧವ ತಲೆಯೆತ್ತದೆ ನುಡಿದ.

"ನೌಕರಿ ಮಾಡುವದು. ಹಣಕ್ಕಾಗಿ: ಹಣ ಇಲ್ಲದಾಗ ನೌಕರಿ ಮಾಡ ಬೇಕಾಗುತ್ತದೆ!"

"ಅವರಿಗೆ ಕಡಿಮೆ ಯಾತರದು? ನಾವು ಅವರ ಉಪ್ಪುಂಡವರು–ಜಗಳ ವಾದದ್ದು ನಮ್ಮಿಬ್ಬರಲ್ಲಿ, ಅದರೆ ನೀವು ಅವರ ತಮ್ಮ ಅಲ್ಲವೇ."

"ಹುಂ, ಹೌದು ಆದರೆ ಮಲತಮ್ಮ." ಮಲತಮ್ಮ ಎಂಬ ಶಬ್ದವನ್ನು ಮಾಧವ ಗಟ್ಟಿಯಾಗಿ ಉಚ್ಚರಿಸಿದ.

ಬಿಂದುವಿಗೆ ಏನುಮಾಡಬೇಕೆಂದೇ ತೋಚಲಿಲ್ಲ. ಪತಿ ಇಷ್ಟು ಬದಲಾಗ ಬಹುದೆಂದು ಆಕೆ ಕನಸಿನಲ್ಲಿಯೂ ಎಣಿಸಿರಲಿಲ್ಲ. ಅಥವಾ ಬೇಕಂತಲೇ ಮಾಡು ತ್ತಿರಬಹುದೇ? ಸಾವಕಾಶವಾಗಿ ಅವಳು ನುಡಿದಳು.

"ನೀವು ಹೀಗೆ ಗಟ್ಟಿಮುಟ್ಟಾಗಿ ದುಡಿಯುತ್ತಿರುವಾಗ ಅವರನ್ನು ನೌಕರಿ ಮಾಡಲು ಬಿಡುವಿರಾ?"

ಮಾಧವ ತಲೆಯೆತ್ತಿ ಹೆಂಡತಿಯನ್ನೊಮ್ಮೆ ದಿಟ್ಟಿಸಿದ. ತಿರುಗಿ ಸ್ವಾಭಾ ವಿಕವಾದ ಶಾಂತ ಸ್ವರದಲ್ಲಿ ನುಡಿದ.

"ಯಾಕೆ ಬಿಡಲಿಕ್ಕಿಲ್ಲ? ಈ ಜಗತ್ತಿನಲ್ಲಿ ಕೆಲವರು ಸಾಯುವತನಕ ತಮ್ಮ ದೇಹ ಸವೆಸುವದಕ್ಕೆನೇ ಬರುತ್ತಾರೆ. ಹಣೆಯಲ್ಲಿ ಬರೆದಂತೆ ಅನುಭವಿಸಬೇಕಾಗು ತ್ತದೆ. ತಾಯಿ ತಂದೆ ಎಂದೋ ಸತ್ತರು. ಅವರನ್ನು ನೋಡಿದ ನೆನಪು ಕೂಡ ಇಲ್ಲ ನನಗೆ. ಅತ್ತಿಗೆ ಆಗಾಗ ಹೇಳುತ್ತಿದ್ದುದನ್ನು ಕೇಳಿದ್ದೆ. ನಾವು ಬಹಳ ಬಡವ ರಿದ್ದೆವು. ಆದರೆ ಕೊನೆಯತನಕ ಬಡತನದ ಝಳ ನನಗೆ ತಾಗಲಿಲ್ಲ. ಎಲ್ಲಿಂ- ದಲೋ ಏನೋ ತೊಡುವದಕ್ಕೆ ಒಳ್ಳೆಯ ಬಟ್ಟೆ, ಓದಲು ಪುಸ್ತಕ, ಕಾಲೇಜಿಗೆ ಫೀ ಸರಿಯಾದ ಹೊತ್ತಿಗೆ ದೊರೆಯುತ್ತಿದ್ದವು. ನನಗಿನ್ನೂ ಗೊತ್ತಿಲ್ಲ. ಗೊತ್ತು ಮಾಡಿಕೊಳ್ಳುವದಕ್ಕೂ ಹೋಗುವದಿಲ್ಲ. ವಕೀಲನಾದ ಮೇಲಂತೂ ಕೇಳು ವದೇ ಬೇಡ. ಮದುವೆಯಾಯಿತು. ನೀನು ಬಂದೆ. ಬರುವಾಗ ಹಣದ ಹೊರೆ

ಹೊತ್ತುತಂದೆ. ಇದೋ ಉಳಿಯಲು ದೊಡ್ಡಮನೆ, ಕೈಯಲ್ಲಿ ಸಾಕಷ್ಟು ಹಣ, ಆದರೆ........ಅದೇ....ಅಣ್ಣನನ್ನು ನೋಡು. ಯಾವಾಗಲೂ ದುಡಿಯುತ್ತಿರುತ್ತಾನೆ. ಹರಿದ ಬಟ್ಟೆಗಳನ್ನೇ ತಿರುತಿರುಗಿ ತೇಪೆ ಹಾಕಿ ಅವನ್ನೇ ತೊಡುತ್ತಾನೆ. ಚಳಿಗಾಲದಲ್ಲಿ ಹಾಕಲು ಒಳ್ಳೆಯ ಬಟ್ಟೆಗಳು ಕೂಡ ಇಲ್ಲ ಆತನಲ್ಲಿ....ಓ! ಎಲ್ಲೋ ಎರಡು ದಿನ....ಅಷ್ಟೇ, ಅಫೀಮು ತಿಂದು ಆರಾಮಾಗಿದ್ದರು ಅಷ್ಟೆ.... ಆದರೆ ಭಗವಂತನಿಂದ ಅದು ನೋಡಲಾಗಲಿಲ್ಲ...." ಇಷ್ಟು ಹೇಳಿ ಯಾವದೋ ಅಗತ್ಯವಿರುವ ಕಾಗದವನ್ನು ಅತ್ತಿತ್ತ ಹುಡಕಾಡತೊಡಗಿದ.

ಬಿಂದುವಾಸಿನಿ ಗೊಂಬೆಯಂತೆ ನಿಂತು ಬಿಟ್ಟಳು. ಪತಿಯ ಹಿಂದಿನ ದಿನಗಳ ಮಾರ್ಮಿಕವಾದ ಕಥೆ, ಆತ ಹೇಳಿದ್ದ ರೀತಿ ಕಂಡು ಆಕೆಗೆ ಪತಿಯ ಬಗ್ಗೆ ತಿರಸ್ಕಾರ ಹುಟ್ಟಿತು. ಅವಳ ನರನರಗಳಲ್ಲಿ ಅವಳ ಭಾವನ ತ್ಯಕ್ತಜೀವನದ ನೆನಹುಗಳು ತುಂಬಿಕೊಂಡವು.

ಮಾಧವ ಹುಡುಕುತ್ತಿದ್ದ ಕಾಗದ ಸಿಕ್ಕಕೂಡಲೇ ಅದನ್ನು ಮೇಜಿನ ಮೇಲಿಟ್ಟು ತನ್ನಷ್ಟಕ್ಕೆ ಬಿಂದುವಾಸಿನಿಗೆ ಕೇಳಿಸುವಂತೆ ಮಾತಾಡತೊಡಗಿದ.

"ನೌಕರಿಯಂತೆ! ನೌಕರಿಯೇ ಅದು! ಮನೆಯಿಂದ ರಾಧಾಪುರಿಯ ಕಚೇರಿಯ ತನಕ–ಅಂದರೆ ಕನಿಷ್ಟ ೩ ಮೈಲಾದರೂ ಆಗಬಹುದು. ದಿನವೂ ಹೋಗಿ ಬರುವದು. ಅಂದರೆ....ಬೆಳಿಗ್ಗೆ ನಾಲ್ಕಕ್ಕೆದ್ದು ಮನೆಯಲ್ಲಿ ಸ್ನಾನ ಮಾಡಿ ಪೂಜೆ ಮುಗಿಸಿ ಹೊರಟನೆಂದರೆ ಬರುವದು ರಾತ್ರಿಗೇನೆ. ಹಂ! ಸಂಬಳ ಎಷ್ಟು ಗೊತ್ತೆ! ಹನ್ನೆರಡು, ಕೇವಲ ಹನ್ನೆರಡು ರೂಪಾಯಿ!"

"ಅಯ್ಯೋ! ಹನ್ನೆರಡೆ! ಹಗಲಿಡೀ ಊಟವಿಲ್ಲದೇ ದುಡಿದು ದುಡಿದು ... ಕೇವಲ ಹನ್ನೆರಡು ರೂಪಾಯಿ!"

ಹೌದು, ಹನ್ನೆರಡು ರೂಪಾಯಿ. ವಯಸ್ಸಾಗಿದೆ. ಮೇಲಾಗಿ ಅಫೀಮಿನ ಚಟ. ಮನೆಯಲ್ಲಿ ಹಾಲು–ತುಪ್ಪವಿಲ್ಲ. ಇಷ್ಟು ದಿನಗಳ ನಂತರ ಭಗವಂತನು ಇನ್ನುಮುಂದೆ ಕಣ್ಣು ತೆರೆಯಬೇಕು ಅಣ್ಣನ ಕಷ್ಟನೋಡಿ!"

ಬಿಂದುವಿನ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯತೊಡಗಿತು. ಎಂದೂ ಪತಿಯ ಕಾಲು ಹಿಡಿಯದ ಅವಳು ಇಂದು ನಿರುಪಾಯಳಾಗಿ ಹಿಡಿಯಬೇಕಾಯಿತು. ಅವನ ಕಾಲ ಬಳಿ ಕುಳಿತು ಹೇಳಿದಳು.

"ನಿಮ್ಮ ಕಾಲಿಗೆ ಬೀಳುತ್ತೇನೆ........ಹೇಗಾದರೂಮಾಡಿ......ಆದರೆ

........ಅಹುದು ಬಹಳ ಅಶಕ್ತ ಮನುಷ್ಯರವರು........ ಈ ರೀತಿ ಬಹಳ ದಿನ ........" ಆಕೆಗೆ ಮುಂದೆ ಮಾತಾಡಲಾಗಲಿಲ್ಲ. ಮಾಧವನ ಕಣ್ಣುಗಳಿಂದ ಎರಡು ಹನಿಗಳು ಆತನ ಗಲ್ಲದ ಮೇಲೆ ಇಳಿದು ಬಂದವು. ಬಿಂದುವಾಸಿನಿಗೆ ಕಾಣಬಾರದೆಂದು ಕೂಡಲೇ ಒರೆಸಿಕೊಂಡು ಆತ ಗದ್ಗದ ಸ್ವರದಲ್ಲಿ ನುಡಿದ.

" ನಾನೇನು ಮಾಡಲಿ? ಅತ್ತಿಗೆಗೆ ನಮ್ಮ ಮನೆಯ ನೀರು ಕೂಡ ಮುಟ್ಟುವ ಮನಸ್ಸಿಲ್ಲ........ ಅವರ ಹೊರತಾಗಿ........ ಸಂಸಾರ ಹೇಗೆ ನಡೆದೀತು?"

" ಇರಲಿ, ಇದೋ ಕೈ ಮುಗಿಯುತ್ತೇನೆ. ನೀವು ನನ್ನ ದೇವರು. ಅವರು ನಿಮಗಿಂತ ಹಿರಿಯವರು! ಅವರು ಕಷ್ಟ ಪಡುವದನ್ನು ನೋಡಿದಾಗ........"

ಮಾಧವನಿಗೆ ಅವಳ ಬಗ್ಗೆ ಕನಿಕರವೆನಿಸಿತು.

"ಕೊನೆಯ ಪಕ್ಷ ಹೀಗಾದರೂ ಮಾಡು. ಹೋಗಿ ಅಕ್ಕನ ಕ್ಷಮೆ ಕೇಳು. ಅವರ ಸಿಟ್ಟಿಳಿದ ಬಳಿಕ ಕರಕೊಂಡು ಬಾ. ನನ್ನ ಕಾಲು ಹಿಡಿದರೆ ನಿನಗೇನು ಸಿಗಬಹುದು ?"

ಮಾತು ಮುಗೆಯುವ ಮೊದಲೇ ಬಿಂದು ಅವನ ಕಾಲು ಬಿಟ್ಟು ಎದ್ದು ನಿಂತಿದ್ದಳು.

"ಕಾಲು ಹಿಡಿದು ಬೇಡುವದು ಈ ಜನ್ಮಕ್ಕೆ ಗೊತ್ತಿಲ್ಲ. ಆ ರಾತ್ರಿ ಅವರು ನೀರು ಕೂಡ ಮುಟ್ಟದ ದಿನ– ನೀವು ಕೂಡ ಅವರಿಗೆ ಬೆಂಬಲ ಕೊಟ್ಟಿರಿ– ಒಂದಕ್ಷರಕೂಡ ಉಚ್ಚರಿಸಲಿಲ್ಲ. ಈ ರೀತಿ ನಾನು ಮಾಡಿದ ತಪ್ಪಿನ ಹೊರೆ ಮತ್ತು ಹೆಚ್ಚಾಯಿತು. ಎಲ್ಲ ದೋಷ ಬಂದದ್ದು ನನ್ನ ಪಾಲಿಗೆ........"

ಮಾಧವ ಕಾಗದ ಹುಡುಕುತ್ತ ಹೇಳತೊಡಗಿದ.

"ಹೌದು, ಆ ದಿನ ಅಂಥ ಸಂದರ್ಭವಿತ್ತು. ........ನಿಜ .... ಈ ವಿದ್ಯೆ ನಾನು ಅಣ್ಣನಿಂದ ಕಲಿತಿದ್ದೇನೆ ಈ ರೀತಿ ಮೌನವಾಗಿದ್ದು, ಒಂದು ದಿನ ನಾನು ಸ್ವರ್ಗಕ್ಕೆ ಕೂಚು ಮಾಡಿದಾಗ........ ಮುಗಿಯಿತು ನನ್ನ ಕೆಲಸ!"

ಬಿಂದು ಮುಂದೆ ಮಾತು ಬೆಳೆಸುವ ಗೋಜಿಗೆ ಹೋಗದೇ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿ ಮಂಚದ ಮೇಲೆ ಧೊಪ್ಪನೆ ಬಿದ್ದಳು.

ಸುಮಾರು ಅರ್ಧ ತಾಸಿನ ಬಳಿಕ ಮಾಧವ ಎದ್ದು ಹೊರಗೆ ಹೋಗಲು ತಯಾರಿ ನಡೆಸಿದ್ದಾಗ ಬಿಂದುವಾಸಿನಿ ತಿರುಗಿ ಆತನಿದ್ದಲ್ಲಿ ಬಂದಳು. ಆತ್ತು

ಅತ್ತು ಆಕೆಯ ಕಣ್ಣು ಕೆಂಪಾಗಿದ್ದವು. ಕಣ್ಣಿನ ಸುತ್ತಲೂ ಎರಡು ಕರಿಯ ವರ್ತುಲಗಳೆದ್ದಿದ್ದವು. ಮಾಧವ ಮತ್ತೊಮ್ಮೆ ಕರುಣೆಯಿಂದ ಹೇಳಿದ.

"ಒಂದು ಬಾರಿ ಹೋಗಿ ಹೇಳಲ್ಲ ? ಅಣ್ಣನದೂ ಚೆನ್ನಾಗಿ ಪರಿಚಯ ವಿದೆ. ನೀನೆಂದರೆ ಆತನ ಮಗಳಿದ್ದಂತೆ. ಹೋಗಿ ಹೇಳು. ಇಲ್ಲವೆನ್ನಲಾರರವರು."

ಬಿಂದುವಾಸಿನಿ ಕಲ್ಲುಕೂಡ ಕರಗುವಂತಹ ಕರುಣ ಸ್ವರದಲ್ಲಿ ಹೇಳಿದಳು.

"ನೀವೇ ಹೋಗಿ ಬನ್ನಿ........ ಮಗುವಿನಾಣೆ........"

ಮಾಧವ ಆಕೆಯ ಅಂತರ್ಯವನ್ನರಿತ. ಕೊಂಚ ಸಿಟ್ಟೂ ಬಂದಿತವನಿಗೆ. ಗಂಭೀರಸ್ವರದಲ್ಲಿ ನುಡಿದ.

"ಸಾವಿರ ಶಪಥಗಳನ್ನು ತೆಗೆದು ಕೊಂಡರೂ ನಾನು ಅವರ ಬಳಿ ಹೋಗಲಿಕ್ಕಿಲ್ಲ. ಅಣ್ಣನ ಬಳಿ ಹೋಗುವ ಧೈರ್ಯವೂ ನನ್ನಲ್ಲಿಲ್ಲ."

ಆದರೂ ಬಿಂದು ಅಲ್ಲಿಂದ ಅಲುಗಾಡಲಿಲ್ಲ.

"ನೀನು ಹೋಗುವದಿಲ್ಲವೇ?" ಮಾಧವ ಕೇಳಿದ.

"ಇಲ್ಲ" ಎಂದುತ್ತರ ಕೊಟ್ಟು ಆಕೆ ಸಾವಕಾಶವಾಗಿ ಅಲ್ಲಿಂದ ಹೋಟು ಹೋದಳು.

೮

ಮನೆಯ ಎದುರಿಗೇನೆ ಶಾಲೆಗೆ ಹೋಗುವ ರಸ್ತೆ. ಇಷ್ಟು ದಿನಗಳಿಂದ ಅಮೂಲ್ಯ ಕೊಡೆಯನ್ನು ತೆರೆದುಕೊಂಡು ಇದೇ ಹಾದಿಯಿಂದ ಹೋಗುತ್ತಿದ್ದ- ಈಗೆರಡು ದಿನಗಳಿಂದ ಬಿಂದುವಾಸಿನಿಗೆ ಅಮೂಲ್ಯನ ಕೊಡೆ ಕಾಣುತ್ತಿಲ್ಲ. ದಿನವೂ ಆತನ ಹಾದಿ ಕಾದು ಕಾದು ಬೇಸರ ಬಂದಿತವಳಿಗೆ. ಬೆಳಗಿಡೀ ಹೊರಗೆ ಜಗುಲಿಯ ಮೇಲೆ ಕುಳಿತುಕೊಂಡೇ ವೇಳೆ ಕಳೆದಿದ್ದವಳು. ಆದರೆ ಅಮೂಲ್ಯನ ಬರವಿನ ಲಕ್ಷಣಕಾಣಲಿಲ್ಲ. ಆ ಕೊಡೆ ಅಮೂಲ್ಯನ ನಡಿಗೆಯ ಠೀವಿ, ಆಕೆಗೆ ಕಾಣಲಿಲ್ಲ. ಅದೇ ದಿನ ಸಂಜೆ ಶಾಲೆಯಿಂದ ತಿರುಗಿ ಬಂದ ನರೇಂದ್ರನನ್ನು ಆಕೆ ಪಕ್ಕಕ್ಕೆ ಕರೆದು ಕೇಳಿದಳು.

"ನರೇನ್, ಏನಪ್ಪಾ, ಅಮೂಲ್ಯ ಈ ರಸ್ತೆಯಿಂದ ಶಾಲೆಗೆ ಹೋಗು ತ್ತಿಲ್ಲವೇ? ನಿಮ್ಮ ಶಾಲೆಗೆ ಇದೊಂದೇ ಸೀಧಾರಸ್ತೆ ಅಲ್ಲ? "

ನರೇಂದ್ರ ಸುಮ್ಮನಿದ್ದ.

" ಇರಲಿ ಬಿಡು ........ ಆದರೆ ನೀವಿಬ್ಬರೂ ಮಾತಾಡುತ್ತ ಶಾಲೆಗೆ ಹೋಗುವದೆಂದರೆ....... ಅದೊಂದು ಸುಖವಾರ ಸನ್ನಿವೇಶ ಅಲ್ಲವೇ?".

ನರೇಂದ್ರನಿಗೆ ನಿಜಕ್ಕೂ ಅಮೂಲ್ಯನೆಂದರೆ ಪ್ರೀತಿ. ಅವನು ಸಣ್ಣ ಧ್ವನಿಯಲ್ಲಿ ಹೇಳಿದ.

"ಅವನು ನಾಚಿಕೆಯಿಂದ....ಈ ಹಾದಿಯಲ್ಲಿ ಹೋಗುವದೇ ಇಲ್ಲ.... ಅದೋ....ಅಲ್ಲಿ ನೋಡಿ. ಅಲ್ಲಿ ಪಕ್ಕಕ್ಕೆ ತಿರುಗಿ ಆ ಓಣಿಯಿಂದ ಶಾಲೆಗೆ ಹೋಗುತ್ತಾನೆ."

ಬಿಂದು ಕಷ್ಟದಿಂದ ನಕ್ಕಳು.

"ಆರೆ ! ನಾಚಿಕೆಯ ಮಾತು ಎಲ್ಲಿಯದಪ್ಪಾ! 'ಹಾಗೆಂದೂ ಮಾಡಬೇಡ, ಇದೇ ಹಾದಿಯಲ್ಲಿ ಬಾ' ಎಂದು ಹೇಳು ಆತನಿಗೆ"

"ಅವನೆಂದೂ ಬರಲಿಕ್ಕಿಲ್ಲ"

ಬಿಂದುವಿಗೆ ಆಶ್ಚರ್ಯವಾಯಿತು.

"ಯಾಕಪ್ಪಾ ?"

"ನೀವು ಸಿಟ್ಟಾಗುವದಿಲ್ಲವಲ್ಲ"

"ಇಲ್ಲ"

"ಅವನ ಮನೆಯವರಿಗೆ ತಿಳಿಸಬಾರದು"

"ಹುಂ."

"ನನ್ನ ತಾಯಿಯ........" ಬಿಂದು ಅಧೀರಳಾದಳು.

"ಇಲ್ಲಪ್ಪಾ ಯಾರಿಗೂ ಹೇಳುವದಿಲ್ಲ"

ನರೇಂದ್ರ ಆಕೆಯ ಕಿವಿಯಲ್ಲಿ ಹೇಳಿದ, "ಒಂದು ದಿನ ಮಾಸ್ತರರು ಆತನ್ನ ಕಿವಿ ಹಿಂಡಿದರು."

ಒಂದೇ ಕ್ಷಣದಲ್ಲಿ ಬಿಂದು ಕಾಳಿಕಾಮೂರ್ತಿಯಾಗಿದ್ದಳು.

"ಯಾಕೆ? ಯಾರೂ ಆತನನ್ನು ಹೊಡೆಯಬಾರದೆಂದು ನಾನು ಹೇಳಿಟ್ಟಿದ್ದೇನಲ್ಲ?"

ನರೇಂದ್ರನಿಗೆ ಈಗ ಆವೇಶ ಬಂದಂತಾಯಿತು. ಹಾವಭಾವದಿಂದ ಹೇಳಿದ.

"ಮಾಸ್ತರರದೇನೂ ತಪ್ಪಲ್ಲ. ಪಾಪ! ಹೊಸಬರೊಬ್ಬರು ಬಂದಿದ್ದಾರೆ. ಅವರಿಗೆ ಗೊತ್ತಿಲ್ಲ. ಆದರೆ ಈ ಜವಾನನಿದ್ದಾನಲ್ಲ ಭೈರ. ನಿರ್ಲಜ್ಜನವನು. ಅವನು ಬಂದು ನನ್ನ ತಾಯಿಗೆ ಹೇಳಿದ. ಅವಳೇನು ಕಡಿಮೆಯೇ! ಮಾಸ್ತರರಿಗೆ ಹೇಳಿ ಕಳಿಸಿದಳು. ಮಾಸ್ತರರು ಕಿವಿಹಿಡಿದೇ ಬಿಟ್ಟರು ಹೇಗೆ ಗೊತ್ತೆ? ಹೀಗೆ ...ಹೀಗೆ." ತನ್ನ ಕಿವಿಯನ್ನು ತಾನೇ ಎಳೆದು ತೋರಿಸಿದ.

ಬಿಂದು ಕೇಳಿದಳು. "ಜವಾನನು ಏನು ಹೇಳಿದ?"

"ಹುಂ. ಹೇಳುತ್ತೇನೆ....ಏನೆಂದರೆ ವಿಶ್ರಾಂತಿಯ ಹೊತ್ತಿಗೆ ಇವನು ನನ್ನ ತಿಂಡಿ ತೀರ್ಥ ಒಯ್ಯುತ್ತಾನಲ್ಲ. 'ಆಗ ಅಮೂಲ್ಯ ನನ್ನ ಹತ್ತಿರ ಏನು ತಿಂಡಿ ಇದೆ ಎಂದು ನೋಡಲು ಬರುತ್ತಾನೆ.' ಎಂದು ನನ್ನ ತಾಯಿಯ ಬಳಿ ಹೇಳಿದ. ಅಮ್ಮನಿಗೆ ಅಷ್ಟೇ ಸಾಕಾ...."

"ಅಮೂಲ್ಯನಿಗೆ ಯಾರೂ ತಿಂಡಿ ತೆಗೆದುಕೊಂಡು ಹೋಗುವದಿಲ್ಲವೇ?" ತಡವರಿಸಿ ಕೇಳಿದಳು.

ನರೇಂದ್ರ ನಾಟಕೀಯವಾಗಿ ನಗುತ್ತ ನುಡಿದ.

"ಯಾರು ಒಯ್ಯಬೇಕವ್ವಾ ಅವನಿಗೆ? ಪಾಪ! ಬಡಹುಡುಗ. ಎರಡು ಬಿಲ್ಲಿಯ ಹುರಿಗಡಲೆ ಕಿಸೆಯಲ್ಲಿ ಹಾಕಿಕೊಂಡು ಬರುತ್ತಾನೆ. ವಿಶ್ರಾಂತಿಯ ವೇಳೆಯಲ್ಲಿ ಮರದ ಬುಡದಲ್ಲಿ ಕುಳಿತು ಅದನ್ನೇ ತಿನ್ನುತ್ತಾನೆ."

ಬಿಂದುವಿನ ಕಣ್ಮುಂದೆ ಭೂಮಿ ಚಕ್ರಾಕಾರವಾಗಿ ಸುತ್ತತೊಡಗಿತು. ಮನೆ ಮೇಲೆ ಕೆಳಗಾದಂತೆ ಭಾಸವಾಯಿತು. ಕುಳಿತಲ್ಲಿಯೇ ಕುಸಿದಿದ್ದಳವಳು.

"ನರೇನ್, ಹೋಗಪ್ಪಾ. ಒಳಗೆ ಹೋಗು" ಎಂದಳು ಪ್ರಯಾಸದಿಂದ.

ಅಂದು ರಾತ್ರಿ ಅನೇಕ ಸಲ ಕರೆದು ಕರೆದು ಹಾಕಿದ ಬಳಿಕ ಬಿಂದುವಾಸಿನಿ ಊಟಕ್ಕೆ ಬಂದು ಕುಳಿತಳು. ಒಂದು ತುತ್ತು ಕೂಡ ಉಣ್ಣಲಿಕ್ಕಾಗಲಿಲ್ಲ ಅವಳಿಂದ. ಅವಳ ಹೃದಯದಲ್ಲಿ ನೂರಾರೂ ಭೇರಿಗಳು ಬಡಿದ ಸದ್ದು, ಕೋಲಾಹಲ, ಗೊಂದಲವೆದ್ದಿತ್ತು. ಹಾಗೆಯೇ ಎದ್ದು ಕೈತೊಳೆದು ಹೊರಟುಹೋದಳು. ಮರುದಿನವೂ ಊಟ ಮಾಡಲಿಲ್ಲ. ಮಲಗಿಯೇ ಇದ್ದಳು. ಅವಳಿಗೆ ಯಾರೊಡನೆಯೂ ಮಾತಾಡುವದೂ ಬೇಡವಾಗಿತ್ತು. ತನ್ನ ಅಪರಾಧ ಮತ್ತೂ ಹೆಚ್ಚಾದರೆ..... ಎಂಬ ವಿಚಿತ್ರ ಭಯ ಅವಳನ್ನು ಆವರಿಸಿತ್ತು. ಮಧ್ಯಾಹ್ನ ಊಟದ ಹೊತ್ತಿಗೆ ಪದ್ಧತಿಯಂತೆ ಮಾಧವ ಊಟಮಾಡುವಾಗ ಬಂದು ಕುಳಿತಿದ್ದಳಷ್ಟೇ.

ಮನೆಯಲ್ಲಿ ದೀಪಗಳು ಉರಿಯುತ್ತಿದ್ದವು. ಮಾಧವ ತನ್ನ ಹಾಸಿಗೆಯ ಮೇಲೆ ಮಲಗಿ ಪೇಪರನ್ನು ಓದುತ್ತಿದ್ದ. ಬಿಂದು ಸಾವಕಾಶವಾಗಿ ಬಂದು ಆತನ ಕಾಲಬಳಿ ಕುಳಿತಳು. ಕೈಯಿಂದ ಆತನ ಕಾಲ ಉಗುರನ್ನು ಕೆರೆಯುತ್ತ ಕುಳಿತಳು.

ಮಾಧವ ಆಕೆ ಏಕೆ ಬಂದಿರುವಳೆಂಬುದನ್ನು ಕೂಡಲೇ ಅರಿತುಕೊಂಡ.

"ನನಗೆಲ್ಲ ತಿಳಿಯುತ್ತದೆ ಬಿಂದೂ. ಆದರೆ ನನ್ನ ಬಳಿ ಅತ್ತರೇನು ಫಲ? ಮತ್ತೊಮ್ಮೆ ಹೇಳುತ್ತೇನೆ ಕೇಳು. ನೀನೇ ಒಂದು ಸಲ ಹೋಗಿ ಬಾ"

"ನೀವು ಹೋಗಿ."

"ನಾನು ಹೋಗಿ ನಿನ್ನ ಮಾತು ಅಣ್ಣನಿಗೆ ಹೇಳಬೇಕು ಅಲ್ಲವೆ"

ಬಿಂದು ಪ್ರಯಾಸದಿಂದ ಹೇಳಿವಳು.

"ನನ್ನದು ತಪ್ಪಾಯಿತು. ಎಂದು ಒಪ್ಪಿಕೊಳ್ಳುತ್ತೇನಲ್ಲ. ಮತ್ತೇನು. ಕಿವಿ ಹಿಡಿದು ಕೇಳುತ್ತೇನೆ. ಕಾಲು ಬೀಳುತ್ತೇನೆ........ಮತ್ತೇನಾದರೂ ಮಾಡಬೇಕಾ........"

" ಇಲ್ಲ ಶಕ್ಯವಿಲ್ಲ " ಎನ್ನುತ್ತ ಮಾಧವ ಪೇಪರನ್ನು ಸಮೀಪದಲ್ಲಿದ್ದ ಟೀಪಾಯದ ಮೇಲಿಟ್ಟು ಮಲಗಿದ.

ಬಿಂದುವಾಸಿನಿ ಬಹಳ ಹೊತ್ತಿನತನಕ ಅಲ್ಲಿಯೇ ಕುಳಿತಿದ್ದಳು. ಮಾಧವ ಮತ್ತೇ ಮಾತಾಡದೇ ಇದ್ದುದನ್ನು ಕಂಡು ಆಕೆ ಎದ್ದು ತನ್ನ ಕೋಣೆಗೆ

ಹೋದಳು. ಮಾಧವನ ನಡತೆ ಆಕೆಯ ಕೊನೆಯಾಸೆಯನ್ನೂ ಸುಟ್ಟು ಹಾಕಿತು ಅವಳ ಹೃದಯದಲ್ಲಿ ಮಾಧವ ಒಂದು ದೊಡ್ಡ ಪರ್ವತವನ್ನು ತಂದು ಇಟ್ಟಂತೆ ಭಾಸವಾಯಿತವಳಿಗೆ. ಎಲ್ಲರೂ ತನ್ನ ಕೈ ಬಿಟ್ಟರೆಂದು ಆವಳಿಗೆ ಅಂದು ತಿಳಿದು ಬಂದಿತು. ಹಾಸಿಗೆಯ ಮೇಲೆ ಮಲಗಿ ಬಿಕ್ಕಿ ಬಿಕ್ಕಿ ಅಳ ತೊಡಗಿದಳು.

ಮರುದಿನ ಬೆಳಿಗ್ಗೆ ಬಿಂದುವಾಸಿನಿಗೆ ತವರುಮನೆಗೆ ಹೋಗಲು ಮಾಧವ ನಿಂದ ಅನುಮತಿ ದೊರೆಯಿತು. ಬಿಂದುವಾಸಿನಿಯ ತಂದೆಗೆ ತುಂಬ ಕಾಯಿಲೆ ಯಾಗಿದೆಯೆಂದು ಮನೆಯಿಂದ ಕಾಗದ ಬಂದಿತ್ತು. ನೀರು ತುಂಬಿದ ಕಣ್ಣು ಗಳಿಂದ ಬಿಂದುವಾಸಿನಿ ತವರುಮನೆಗೆ ಹೊರಟುನಿಂತಳು. ಅಡಿಗೆಯವಳು ಪಲ್ಲಕ್ಕಿಬಳಿಯಲ್ಲಿ ಹೋಗಿ ಮೃದುಸ್ವರದಲ್ಲಿ, ನುಡಿದಳು. "ತಂದೆಗೆ ಗುಣವಾದ ದ್ದನ್ನು ನೋಡಿಕೊಂಡು ಬೇಗ ಬನ್ನಿರಮ್ಮ."

ಬಿಂದು ಕೂಡಲೇ ಪಲ್ಲಕ್ಕಿಯಿಂದ ಇಳಿದು ಅವಳ ಕಾಲು ಮುಟ್ಟಿ ನಮ ಸ್ಕಾರ ಮಾಡಿದಳು. ಅಡಿಗೆಯವಳಿಗೆ ತುಂಬಾ ಸಂಕೋಚವೆನಿಸಿತು. ಬಿಂದು ವಾಸಿನಿಯು ಅಷ್ಟು ನಮ್ರಳಾಗಿದ್ದುದನ್ನು ಆ ಮನೆಯವರು ಇಲ್ಲಿಯತನಕ ಕಂಡಿರಲಿಲ್ಲ. ಬಿಂದು ನುಡಿದಳು.

"ಹಾಗಲ್ಲಮ್ಮ, ನೀನು ಬ್ರಾಹ್ಮಣ ಮನೆತನದವಳು. ಮೇಲಾಗಿ ವಯಸ್ಸಿ ನಲ್ಲಿ ಹಿರಿಯವಳು. ಎರಡು ದಿನಗಳಲ್ಲಿ ಬರುವ ಪ್ರಯತ್ನ ಮಾಡುವೆ. ಆದರೆ ಇದೇ ಕೊನೆಯ ಸಲ ಹೋದಂತಾಗಬಾರದಷ್ಟೇ ?" ಕೊನೆಯ ವಾಕ್ಯವನ್ನು ಆಕೆ ಕೊಂಚ ಖೇದ ಮಿಶ್ರಿತ-ನಗೆಯಿಂದ ನುಡಿದಳು.

ಉತ್ತರರೂಪವಾಗಿ ಅಡಿಗೆಯವಳು ಆಕೆಯ ಬೆನ್ನು ನೇವರಿಸಿ ಬೀಳ್ಕೊ ಟ್ಟಳು.

ಎಲೋಕೇಶಿ ಅಲ್ಲಿಯೆ ನಿಂತಿದ್ದಳು. ಕೊಂಚ ಜಬರಿನಲ್ಲಿ ನುಡಿದಳು.

"ಏನಮ್ಮ ಬಿಂದೂ, ಯಾರ ತಾಯಿ-ತಂದೆಗಳೂ ಈ ವರೆಗೆ ಕಾಯಿಲೆ ಬಿದ್ದಿಲ್ಲವೇ ?"

ಬಿಂದು ಮಾತಾಡದೇ ಆಕೆಯ ಕಾಲು ಸಹ ಮುಟ್ಟಿ ನಮಸ್ಕರಿಸಿದಳು.

"ನೀನೇನೂ ಹೆದರಬೇಡ, ಹೋಗಿ ಬಾ, ಬರುವತನಕ ಮನೆಯನ್ನು ನಾನು ನೋಡಿಕೊಳ್ಳುತ್ತೇನೆ" ಎಂದಳು ಎಲೋಕೇಶಿ.

ಬಿಂದು ಕಣ್ಣೊರಸಿಕೊಂಡು ಪಲ್ಲಕ್ಕಿಯಲ್ಲಿ ಕುಳಿತಳು. ಪಲ್ಲಕ್ಕಿ ಮುಂದೆ ಸಾಗಿತು.

ಅನ್ನಪೂರ್ಣೆ ಅಡಿಗೆಯವಳಿಂದ ಇದೆಲ್ಲ ತಿಳಿದುಕೊಂಡೂ ಸುಮ್ಮನಿದ್ದಳು. ಇದರ ಹಿಂದೆ ಎಂದೂ ಬಿಂದುವಾಸಿನಿ ಅಮೂಲ್ಯನನ್ನು ಬಿಟ್ಟು ತವರುಮನೆಗೆ ಹೋಗಿದ್ದಿಲ್ಲ. ಬಿಂದುವಾಸಿನಿ ಮಗುವನ್ನು ಕಾಣದೇ ಒಂದು ತಿಂಗಳ ಮೇಲಾಗಿತ್ತು. ಅವಳ ದುಃಖವನ್ನು ಅನ್ನಪೂರ್ಣೆ ಅರ್ಥ ಮಾಡಿಕೊಂಡಿದ್ದಳು.

ರಾತ್ರಿ ಅಮೂಲ್ಯ ತಂದೆಯ ಹತ್ತಿರ ಏನನ್ನೋ ಹೇಳುತ್ತಲಿದ್ದ.

ಒಳಗಿನ ಕೋಣೆಯಲ್ಲಿ ದೀಪದ ಬೆಳಕಿನಲ್ಲಿ ಹೊಲೆಯುತ್ತಿದ್ದ ಅನ್ನಪೂರ್ಣೆ ಒಂದು ಸಲ ನಿಟ್ಟುಸಿರು ಬಿಟ್ಟು ತನ್ನಷ್ಟಕ್ಕೆ ಅಂದುಕೊಂಡಳು.

"ರಾಮ ! ರಾಮ ! ಹೋಗುವ ಹೊತ್ತು 'ಇದೇ ಕೊನೆಯ ಸಲ' ಎಂದಳಲ್ಲವೇ ಅವಳು, ತಾಯಿ, ದುರ್ಗಾ ! ಬಿಂದುವನ್ನು ಕಾಪಾಡಮ್ಮಾ !"

ಮಗನ ಬಾಯಿಯಿಂದ ನಡೆದ ಘಟನೆಗಳನ್ನೆಲ್ಲ ಕೇಳಿ ಯಾದವ ಕೊನೆಗೊಮ್ಮೆ ಅನ್ನಪೂರ್ಣೆಗೆ ಹೇಳಿದ. "ನೀನು, ಮಾಡಿದ್ದು ನನಗೆ ಸರ್ವಥಾ ಸೇರಲಿಲ್ಲ. ನನ್ನ ಮಗುವನ್ನು ನೀವು ಈ ವರೆಗೆ ಯಾರೂ ಅರ್ಥ ಮಾಡಿಕೊಂಡಿಲ್ಲ. ಮಾಧವನೂ ಕೂಡ !"

ಅನ್ನಪೂರ್ಣೆ ತನ್ನ ಪಕ್ಷ ಸಮರ್ಥಿಸಿಕೊಳ್ಳಲು ನುಡಿದಳು.

"ಅವಳಾದರೂ 'ಅಕ್ಕಾ' ಎಂದು ಒಂದು ಬಾರಿಯಾದರೂ ಬರಬಾರದಿತ್ತೆ ? ಬಲಾತ್ಕಾರದಿಂದಲಾದರೂ ಮಗುವನ್ನು ಒಯ್ಯಬಹುದಿತ್ತು ! ಆಗ ಹಾಗೂ ಮಾಡಲಿಲ್ಲ. ಆ ದಿನ........ಹೌದು ಗೃಹಪೂಜೆಯ ದಿನ. ........ ಇಡಿ ದಿನ ದುಡಿದು ಬರುತ್ತಿದ್ದೆ....ಎಂಥ ಎಂಥ ಮಾತು ಕೇಳಬೇಕಾಯಿತು ಗೊತ್ತೆ?"

"ಬಿಂದುವಿನ ಮನಃಸ್ಥಿತಿ ನನಗೊಬ್ಬನಿಗೇ ಗೊತ್ತು. ಆದರೆ.........ಅಕ್ಕನೆನಿಸಿಕೊಂಡ ನೀನು ಕ್ಷಮಿಸದಿದ್ದರೆ,.........ನೀನು ಅವಳಿಗಿಂತ ಹಿರಿಯಳಿದ್ದೂ ಉಪಯೋಗವೇನು ? ನೀನೂ ಹಾಗೆ, ಆ ಮಾಧವನೂ ಹಾಗೆ. ನಿಮಗೆ ಗೊತ್ತಿದ್ದೂ ನೀವು ಆ ಮಗುವಿನ ಜೀವ ಹಿಂಡಿದಿರಿ."

ಅನ್ನಪೂರ್ಣೆಯ ಕಣ್ಣುಗಳಿಂದ ನೀರಿನ ಹನಿಗಳುದುರತೊಡಗಿದವು.

ಅಮೂಲ್ಯ ಕೇಳಿದ, "ಅಪ್ಪಾ, ಚಿಕ್ಕಮ್ಮ ಏಕೆ ಬರಬಾರದೆಂದು ಹೇಳಿದ್ದಾರೆ ?"

ಅನ್ನಪೂರ್ಣೆ ಕಣ್ಣೊರಸಿಕೊಳ್ಳುತ್ತ ನುಡಿದಳು.

"ಚಿಕ್ಕಮ್ಮನ ಬಳಿ ಹೋಗುವಿಯೇನಪ್ಪ ?"

ಅಮೂಲ್ಯ ಇಲ್ಲವೆಂದು ತಲೆಯಲ್ಲಾಡಿಸಿದ.

"ಯಾಕಿಲ್ಲ? ಹೋಗು. ಅವಳು ಅಜ್ಜನ ಮನೆಗೆ ಹೋಗಿದ್ದಾಳೆ. ನೀನೂ ಹೋಗು."

ಅಮೂಲ್ಯ ಸುಮ್ಮನಿದ್ದ, ಯಾದವ ಕೇಳಿದ.

"ಹೋಗುವಿಯಲ್ಲವೇ ಮಗು ?"

ಅಮೂಲ್ಯ ತಲೆ ತಗ್ಗಿಸಿದ, " ಇಲ್ಲ ".

೫-೬ ದಿನಗಳಿಂದ ಯಾದವ ರಾತ್ರಿಯೇ ಕೆಲಸಕ್ಕೆ ಹೋಗುತ್ತಿದ್ದ. ಒಂದು ದಿನರಾತ್ರಿ ಇವೇ ರೀತಿ ಹೋಗಲು ಸಿದ್ಧನಾಗಿ ತಂಬಾಕು ಸೇದುತ್ತ ಕುಳಿತಿದ್ದ-ಒಮ್ಮೆಲೆ ಏನನ್ನಿಸಿತೋ ಏನೋ ಅನ್ನಪೂರ್ಣೆಯತ್ತ ನೋಡುತ್ತ ಸಾವಕಾಶವಾಗಿ ನುಡಿದ.

" ನಿನ್ನೆಯಿಂದ ಹೊಟ್ಟೆಯಲ್ಲಿ ಒಂದು ತರಹದ ಸಂಕಟ. ಆಗ ಹೀಗೆ ಕಣ್ಮುಚ್ಚಿ ಮಲಗಿದ್ದಾಗ ಬಾಗಿಲ ಹತ್ತಿರ ಬಿಂದುವಾಸಿನಿ ನಿಂತಂತೆ ಭಾಸವಾಯಿತು ನನಗೆ!"

ಭಗವಂತನ ನಾಮೋಚ್ಚಾರ ಮಾಡುತ್ತ ಯಾದವ ಹೊರಟುಹೋದ.

ಬೆಳಿಗ್ಗೆ ಅನ್ನಪೂರ್ಣೆ ಉದಾಸೀನತೆಯಿಂದಲೇ ಅಡಿಗೆಯನ್ನು ಪ್ರಾರಂಭಿಸಿದ್ದಳು. ಅವಳ ಹೃದಯವೂ ಢವಢವಗುಟ್ಟುತ್ತಿತ್ತು. ಒಂದು ಭಯಂಕರ ವಿಪತ್ತು ತನಗಾಗಿ ಕಾದಿದೆ ಎಂದು ಅವಳಿಗನಿಸತೊಡಗಿತ್ತು. ಸುಮಾರು ೯ ಘಂಟೆಗೆ ಆ ಮನೆಯ ಜವಾನ ಬಂದು ಹೇಳಿದ.

"ರಾಯರು ಬೆಳಿಗ್ಗೆ ನಸುಕಿನಲ್ಲೇ ಫರಾಸಡಾಂಗಾಕ್ಕೆ ಹೋಗಿದ್ದಾರೆ. ಅಮ್ಮನಿಗೆ ತುಂಬ ಕಾಹಿಲೆಯಂತೆ".

ಪತಿಯ ರಾತ್ರಿಯ ಮಾತು ಅನ್ನಪೂರ್ಣೆಗೆ ನೆನಪಾಯಿತು. ಅವಳ ಎದೆಯ ಮಿಡಿತ ಒಂದು ಕ್ಷಣ ನಿಂತಿತು. ಮರಳಿ ಮೊದಲಿನ ಇಮ್ಮಡಿಯಷ್ಟು ವೇಗದಿಂದ ಎದೆಯಲ್ಲಿ ಢವಢವಗುಟ್ಟಲಾರಂಭಿಸಿತು.

" ಏನಪ್ಪಾ, ಕಾಹಿಲೆ? "

" ಸರಿಯಾಗಿ ಗೊತ್ತಿಲ್ಲ. ಆದರೆ ಗಳಿಗೆಗೊಮ್ಮೆ ಎಚ್ಚರದಪ್ಪುತ್ತಾರಂತೆ. ಈ ರೀತಿಯೇ ಜ್ವರವಂತೆ!"

ಸಾಯಂಕಾಲ ಯಾದವ ಮನೆಗೆ ಬಂದ. ಸುದ್ದಿ ತಿಳಿದು ಆತ ಮೌನ ವಾಗಿ ಅತ್ತ. ಸಹಿಸಿಕೊಳ್ಳಲಾರದೇ ಹೆಂಡತಿಗೆ ನುಡಿದ.

"ಬಂಗಾರದ ಪ್ರತಿಮೆಯಂತಿದ್ದ ನನ್ನ ಮಗು........ ಅಯ್ಯೋ... ನೀನೇ ಅದನ್ನು ನೀರಿನಲ್ಲಿ ತೇಲಿಸಿ ಬಿಟ್ಟೆ........ ನಾನೀಗ ಹೊರಟೆ."

ದುಃಖ ಮತ್ತು ಗ್ಲಾನಿಯಿಂದ ಆಕೆಯ ಹೃದಯ ಬಿರಿಯುತ್ತಲಿತ್ತು. ಅಮೂಲ್ಯನಿಗಿಂತಲೂ ಆಕೆಯ ಮೇಲೆ ಒಂದು ರೀತಿಯಿಂದ ಹೆಚ್ಚು ಪ್ರೀತಿ ಇತ್ತು. ಕಣ್ಣುಗಳನ್ನು ಒರೆಸಿಕೊಂಡು, ಪತಿಯ ಕಾಲಿಗೆ ನೀರು ತಂದು ಕೊಟ್ಟು ಒತ್ತಾಯದಿಂದ ಅವನನ್ನು ಸಂಧ್ಯಾವಂದನೆಗೆ ಕೂಡ್ರಿಸಿದಳು. ತಾನು ಒಂದು ಕತ್ತಲೆಯ ಮೂಲೆಯಲ್ಲಿ ಶೂನ್ಯ ಮನಸ್ಕಳಾಗಿ ಕುಳಿತಳು.

ಕೊಂಚ ಹೊತ್ತಿನಲ್ಲಿ ಅನ್ನಪೂರ್ಣೆಗೆ ಮಾಧವನ ಸ್ವರ ಕೇಳಿಸಿತು. ಅವಳು ಎರಡೂ ಕೈಗಳಿಂದ ಎದೆಯನ್ನು ಒತ್ತಿ ಹಿಡಿದು ಮುಂಬರುವ ಆಘಾತವನ್ನು ತಡಕೊಳ್ಳುವ ಯತ್ನ ನಡಸಿದ್ದಳು.

ಮಾಧವ ಒಳಗೆ ಬಂದು ಹೇಳಿದ.

" ಅತ್ತಿಗೆ, ಎಲ್ಲ ಕೇಳಿದಿರಲ್ಲ?"

ಅನ್ನಪೂರ್ಣೆ ಮಾತಾಡಲಿಲ್ಲ. ತಲೆಯನ್ನು ಕೂಡ ಎತ್ತಲಿಲ್ಲ.

"ಅಮೂಲ್ಯನಿಗೆ ಒಂದು ಸಲ ಅಲ್ಲಿ ಹೋಗಿ ಬರಲೇ ಬೇಕು. ಅತ್ತಿಗೆ, ಬಹುಶಃ ಕೊನೆಗಾಲ ಬಂದಿದೆಯೆಂದು ಕಾಣುತ್ತದೆ."

ಅನ್ನಪೂರ್ಣೆಗೆ ತಡೆಯಲಾಗಲಿಲ್ಲ. ಒಮ್ಮೆಲೇ ಅಡ್ಡಬಿದ್ದು ರೋದಿಸ ತೊಡಗಿದಳು. ಸಂಧ್ಯಾವಂದನೆ ಅರ್ಧಕ್ಕೇ ಬಿಟ್ಟು ಯಾದವ ಓಡೋಡಿ ಒಳಗೆ ಬಂದ.

" ಶಕ್ಯವಿಲ್ಲ........ ಎಂದೂ ಶಕ್ಯವಿಲ್ಲ........ ಮಾಧವ, ಹೀಗೆಂದೂ ಆಗಲಾರದು. ನಾನೀವರೆಗೆ ಯಾರಿಗೂ ತೊಂದರೆ ಕೊಟ್ಟಿಲ್ಲ. ಭಗವಂತ ನನಗೆ ಈ ವಯಸ್ಸಿನಲ್ಲಿ ....... ಕಷ್ಟಕೊಡಲಾರ........"

ಮಾಧವ ಸುಮ್ಮನಿದ್ದ. ಯಾದವ ಮುಂದುವರಿಸಿದ.

" ಎಲ್ಲಾ ಸಂಗತಿ ಸ್ಪಷ್ಟ ಹೇಳು. ನಾನು ಮಗುವನ್ನು ಕರಕೊಂಡು ಬರುತ್ತೇನೆ. ಹೆದರ ಬೇಡ........ ಗಾಡಿ ಜೊತೆಯಲ್ಲಿ ತಂದಿದ್ದೀಯಾ? ಹುಂ... ಸರಿ ಹೊರಟು ಬಿಡೋಣ ".

ನಾನು ಹೆದರಿಲಿಲ್ಲ ಅಣ್ಣ. ಆದರೆ ತಾವು ಇದೇನು ಮಾಡುತ್ತಿದ್ದೀರಿ?"

"ಏನಿಲ್ಲ, ನನಗೆಲ್ಲ ಗೊತ್ತಿದೆ. ಏ ಅಮೂಲ್ಯ, ಏಳು........ ಏಳಪ್ಪಾ ಹೋಗೋಣ".

"ಅಣ್ಣ ನಸುಕಿನಲ್ಲೆದ್ದು ಹೋದರಾಯಿತು"........

"ಛೀ, ಹುಚ್ಚನಂತೆ ಮಾತಾಡ ಬೇಡ........ ಗಾಡಿ ಕರೆಯುತ್ತಿಯೋ ........ ನಾನು ನಡಕೊಂಡು ಹೋಗಲೋ?"

ಮಾಧವ ಮಾತು ಬೆಳಸದೇ ಹೋಗಿ ಗಾಡಿ ಕರೆದು ತಂದ. ಎಲ್ಲರೂ ಗಾಡಿಯಲ್ಲಿ ಕುಳಿತರು. ಯಾದವ ಕೇಳಿದ.

"ಮುಂದೇನಾಯಿತು?"

"ನನಗೇನೂ ಸರಿಯಾಗಿ ಗೊತ್ತಿಲ್ಲ. ನಾನಲ್ಲಿ ಇದ್ದಿಲ್ಲವಲ್ಲ..........೪-೫ ದಿನಗಳ ಹಿಂದೆ ಬಹಳ ಜ್ವರ ಬಂದಿತೆಂದು ಕೇಳಿದ್ದೇನೆ. ಬಳಿಕ ಗಳಿಗೆಗೊಮ್ಮೆ ಎಚ್ಚರದಪ್ಪಿ........... ಅಲ್ಲಿಂದ ಈವರೆಗೆ ಒಂದು ತೊಟ್ಟು ಹಾಲನ್ನಾಗಲಿ, .... ಔಷಧವನ್ನಂತೂ ಕುಡಿಯುವದು ದೂರ ಉಳಿಯಿತು........... ಸರಿಯಾಗಿ ಗೊತ್ತಿಲ್ಲ........ ಆದರೆ ಬದಕುವ ಆಶೆ........ ಇಲ್ಲ."

ಯಾದವ ಆವೇಶದಿಂದ ನುಡಿದ.

"ಬಹಳ ಇದೆ. ನೂರಕ್ಕೆ ನೂರು ಬದಕುವ ಆಶೆ ಇದೆ. ನನ್ನ ಮಗುವಿನ ಆಯುಷ್ಯ ಇಷ್ಟು ಕಡಿಮೆಯೇ? ಛೀ ...... ನಾನೀವರೆಗೆ ಸುಳ್ಳು ಹೇಳಿಲ್ಲ.... ಆವಳು ಖಂಡಿತ ಬದುಕುತ್ತಾಳೆ."

ಉತ್ತರ ರೂಪವಾಗಿ ಮಾಧವ ಅಣ್ಣಾನ ಕಾಲುಮುಟ್ಟಿ ನಮಸ್ಕರಿಸಿದ.

## ೯

ಎಷ್ಟೋ ದಿನಗಳಿಂದ ಬಿಂದುವಾಸಿನಿ ಸರಿಯಾಗಿ ಉಣ್ಣುತ್ತಿರಲಿಲ್ಲ. ಹೀಗಾಗಿ ಅವಳ ದೇಹ ಸವೆಯುತ್ತ ಬಂದುದು ಯಾರಿಗೂ ಅಷ್ಟು ಲಕ್ಷದಲ್ಲಿ ಹೋಗಿದ್ದಿಲ್ಲ. ತವರುಮನೆ ಮುಟ್ಟಿದ ಮರುದಿನವೇ ಅವಳಿಗೆ ಜ್ವರ ಬಂದಿತು. ಮರುದಿನದಿಂದ ಮೂರ್ಛೆ ಬರಲು ಆರಂಭವಾಯಿತು. ದಿನಕ್ಕೆ ಮೂರು-ನಾಲ್ಕು ಸಲ. ಕೊನೆಯ ಸಲ ಎಚ್ಚರದಪ್ಪಿದಾಗ ಎಲ್ಲರೂ ಬಹಳ ಹೆದರಿದರು. ಈ ಸಲದ ಮೂರ್ಛೆ ತಿಳಿಯುವದಕ್ಕೆ ಬಹಳ ಹೊತ್ತು ಹಿಡಿಯಿತು. ಬಹಳ ಪ್ರಯಾಸದಿಂದ ಎಚ್ಚರ ಬಂದಾಗ ಆಕೆಯ ನಾಡಿಯ ಮಿಡಿತ ಕೊಂಚ ಮಂದವಾಗಿತ್ತು. ಈ ಸುದ್ದಿ ಕೇಳಿ ಮಾಧವ ಓಡೋಡಿ ಬಂದ. ಬಿಂದು ಕಷ್ಟದಿಂದ ನಮಸ್ಕರಿಸಿದಳು. ಆದರೆ ಒಂದು ಹನಿ ಔಷಧ....ಹಾಲು ಕುಡಿಯಲಿಲ್ಲ.

ಮಾಧವ ಹತಾಶನಾಗಿ ಕೇಳಿದ.

"ಸುಮ್ಮನೆ ಆತ್ಮಹತ್ಯೆ ಏಕೆ ಮಾಡಿಕೊಳ್ಳುತ್ತಿರುವೆ"

ಬಿಂದು ಸನ್ನೆಯಿಂದ ಅವನನ್ನು ಸಮೀಪಕ್ಕೆ ಕರೆದಳು.

ಕೊಂಚ ಹೊತ್ತು ಏನೂ ಮಾತಾಡಲಿಲ್ಲ. ಕೊನೆಗೆ ಸಾವಕಾಶವಾಗಿ ನುಡಿದಳು.

"ಕೇವಲ.... .. ಎರಡುಸಾವಿರ ರೂಪಾಯಿ ನರೇಂದ್ರನಿಗೆ ಕೊಟ್ಟು ಮುಂದೆ ಓದಿಸಬೇಕು. ಏಕೆಂದರೆ ಆತ ಅಮೂಲ್ಯನನ್ನು ಪ್ರೀತಿಸುತ್ತಾನೆ....ಉಳಿದುದೆಲ್ಲ ಮಗುವಿನದೇ........"

ಮಾಧವ ಉಕ್ಕಿ ಬಂದ ಅಳುವನ್ನು ಹಲ್ಲಿನಿಂದ ತುಟಿಕಚ್ಚಿ ಬಿಗಿಹಿಡಿದ. ಬಿಂದುವಾಸಿನಿ ಮುಂದೆ ಹೇಳತೊಡಗಿದಳು.

"ಅವನ ಹೊರತಾಗಿ........ನನಗೆ ಯಾರೂ ಬೆಂಕಿ ಕೊಡಬಾರದು."

ಮಾಧವ ಈ ಆಘಾತವನ್ನೂ ತಡಕೊಂಡು ಕಿವಿಯಲ್ಲಿ ಕೇಳಿದ.

"ಯಾರನ್ನಾದರೂ ನೋಡ ಬಯಸುವಿಯಾ?"

"ಇಲ್ಲ"

ಬಿಂದುವಿನ ತಾಯಿ ಔಷಧ ಕುಡಿಸುವ ಕೊನೆಯ ಪ್ರಯತ್ನ ನಡೆಸಿದಳು. ಆದರೆ ಬಿಂದುವಾಸಿನಿ ತನ್ನ ಹಲ್ಲುಗಳನ್ನು ಬಿಗಿಹಿಡಿದಳು.

ಮಾಧವ ಏನನ್ನೋ ನಿಶ್ಚಯಿಸಿ ಹೊರಟುನಿಂತ.

"ಬಿಂದು, ನೀನು ನಮ್ಮ ಮಾತು ಕೇಳುವದಿಲ್ಲ. ನೀನು ಯಾರ ಆಜ್ಞೆ ಈ ವರೆಗೆ ಪಾಲಿಸಿದ್ದಿಯೋ ಅಂಥವರನ್ನು ಈಗ ಕರೆದು ತರುವದು ಅನಿವಾರ್ಯ. ಇದೋ ಹೊರಟು ನಿಂತೆ........ನಾನು....ಬರುವತನಕ......."

ಮಾಧವ ಸರಕ್ಕನೆ ಹೊರಗೆ ಬಂದು ಕಣ್ಣೀರನ್ನು ಒರಸಿಕೊಂಡ.ಆ ರಾತ್ರಿ ಬಿಂದು ಶಾಂತಚಿತ್ತಳಾಗಿ ಮಲಗಿದಳು.

ಸೂರ್ಯೋದಯದ ಹೊತ್ತಿಗೆ ಮಾಧವ ಬಿಂದುವಿನ ಕೋಣೆ ಹೊಕ್ಕ. ಅಲ್ಲಿದ್ದ ದೀಪ ಆರಿಸಿ ಕಿಡಿಕಿ ತೆರೆಯುತ್ತಲೇ ಬಿಂದು ಕಣ್ದೆರೆದಳು. ಎದುರಿನ ಕಿಡಕಿಯಿಂದ ಸುಪ್ರಭಾತದ ತೂರಿದ ಸ್ನಿಗ್ಧ ಪ್ರಕಾಶದಲ್ಲಿ ಆಕೆ ಪತಿಯ ಮೋರೆ ನೋಡಿ ಮುಗುಳು ನಗು ನಕ್ಕು ಕೇಳಿದಳು.

"ಯಾವಾಗ ಬಂದಿರಿ ?"

"ಇದೇ ಬರುತ್ತಿದ್ದೇನೆ. ಅಣ್ಣ ನಿನ್ನೆಯಿಂದ ಒಂದೇ ಸವನೆ ಕಣ್ಣೀರು ಸುರಿಸುತ್ತಿದ್ದಾನೆ."

"ಇರಬಹುದು ... ...ಅವರ ಕಾಲಧೂಳಿ ತಂದಿದ್ದೀರಾ ?"

"ಹೊರಗೆ ಕುಳಿತು ತಂಬಾಕು ಸೇದುತ್ತಿದ್ದಾನೆ. ಅತ್ತಿಗೆ ಕಾಲು ತೊಳೆಯುತ್ತಿದ್ದಾಳೆ. ಮಗು ಅತ್ತು ಅತ್ತು ಗಾಡಿಯಲ್ಲಿ ಮಲಗಿ ಬಿಟ್ಟ....ಈಗ ಮೇಲಿದ್ದಾನೆ. ಕರೆದು ತರಬೇಕೆ ?"

ಬಿಂದು ಶಾಂತಚಿತ್ತದಿಂದ ಹೇಳಿದಳು.

"ಬೇಡ. ಇರಲಿ."

ಅನ್ನಪೂರ್ಣೆ ಕೋಣೆಯೊಳಗೆ ಬಂದಳು. ಕಣ್ಮುಚ್ಚಿ ಮಲಗಿದ ಬಿಂದುವಾಸಿನಿಯ ತಲೆ ನೇವರಿಸಿದಾಗ ಆಕೆ ಬೆಚ್ಚಿಬಿದ್ದಳು. ಒಂದು ನಿಮಿಷ ಕೋಣೆಯಲ್ಲಿ ನಿಶಬ್ದವಾಗಿತ್ತು. ಕೊನೆಗೊಮ್ಮೆ ಅನ್ನಪೂರ್ಣೆ ಮಮತೆಯಿಂದ ಕೇಳಿದಳು.

"ಔಷಧ ಏಕೆ ಕುಡಿಯುವದಿಲ್ಲ ಮಗೂ, ಸಾಯಲಿಚ್ಛಿಸುವಿಯಾ ?"

ಬಿಂದು ಉತ್ತರ ಕೊಡಲಿಲ್ಲ.

ಅನ್ನಪೂರ್ಣೆ ಆಕೆಯ ಕಿವಿಯ ಬಳಿ ತನ್ನ ಮುಖವನ್ನೊಯ್ದು ಹೇಳಿದಳು.

"ಎದೆ ಬಿರಿದು ಹೋಗುತ್ತಲಿದೆ.......ನಿನಗೆ ಗೊತ್ತಿದೆಯೇ?"

ಬಿಂದು ನಿಧಾನವಾಗಿ ನುಡಿದಳು.

"ಹೌದಕ್ಕ .......ಎಲ್ಲ ತಿಳಿದಿದೆ."

"ಹಾಗಾದರೆ ಈ ಕಡೆ ತಿರುಗು, ಮಗು ಬಂದಿದ್ದಾನೆ....ಅವರು ಬಂದಿದ್ದಾರೆ....ಈ ಕಡೆ ಮುಖ ತಿರುಗಿಸಿಮ್ಮಾ...."

ಬಿಂದು. ಆದರೂ ತಿರುಗಿಸಲಿಲ್ಲ. ತಲೆ ಅಲ್ಲಾಡಿಸುತ್ತ ಹೇಳಿದಳವಳು.

"ಇಲ್ಲ ಅಕ್ಕಾ, ಮೊದಲು......"

ಇದೇ ಸಮಯಕ್ಕೆ ಯಾದವ ಕೋಣೆಯೊಳಗೆ ಬಂದ. ಅನ್ನಪೂರ್ಣೆ ಬಿಂದುವನ್ನು ತಲೆತನಕ ಚಾದರಿನಿಂದ ಮುಚ್ಚಿದಳು.

ಯಾದವ ಬಂದರೆಕ್ಷಣ ತನ್ನ ಪ್ರೀತಿಯ ಬಿಂದುವನ್ನು ದಿಟ್ಟಿಸಿ ಕಣ್ಣೀರು ತಡೆದು ಹೇಳಿದ.

"ಮನೆಗೆ ನಡೆಯಮ್ಮ...... ಕರೆದುಕೊಂಡು ಹೋಗಲು ಬಂದಿದ್ದೇನೆ"

ಅವನ ಕಳಾಹೀನ ಮೋರೆ ನೋಡಿ ಅಲ್ಲಿದ್ದವರೆಲ್ಲರ ಕಣ್ಣು ತುಂಬಿ ಬಂದವು. ಯಾದವ ಕೊಂಚ ಹೊತ್ತು ತಡೆದು ಮತ್ತೊಮ್ಮೆ ನುಡಿದ.

"ಹಿಂದೆ .. ಒಂದು ದಿನ ನೀನು ಇಷ್ಟು ಸಣ್ಣವಳಿದ್ದಾಗ ಕರೆದೊಯ್ಯಲು ಬಂದಿದ್ದೆ........ ಆಗ ಮತ್ತೊಮ್ಮೆ ನನಗೆ ಬರಬೇಕಾದೀತೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ...... ಮಗು, ಇಲ್ಲಿ ಕೇಳು........ನಾನೀಗ ಬಂದಿದ್ದೇನೆ ಕರಕೊಂಡು ಹೋಗುವೆ.... ನಾನೆಂದೂ ಸುಳ್ಳು ಮಾತಾಡುವದಿಲ್ಲ. ಗೊತ್ತಿದೆಯಲ್ಲವೇ ಮಗು?''

ಯಾದವ ಹೊರಟುಹೋದ. ಬಿಂದು ಅನ್ನಪೂರ್ಣೆಯತ್ತ ಮುಖ ತಿರುವಿ ಹೇಳಿದಳು.

" ಅಕ್ಕಾ, ಏನೇನು ತಿನ್ನಲು ಕೊಡುತ್ತೀರೋ ಕೊಡಿ........ ಮಗುವನ್ನು ನನ್ನ ಬದಿ ಮಲಗಿಸಿ ನೀವೆಲ್ಲ ಹೊರಟು ಹೋಗಿ....... ಈಗೇನು ಹೆದರಿಕೆಯಿಲ್ಲ........ ನಾನು ಸಾಯುವದಿಲ್ಲ. "

# ಯಾರ ಹೊಣೆ?

## ೧—ಮದುವೆ

ಸಾಗರಪುರದಲ್ಲಿ ಇಂದು ತುಂಬ ಗದ್ದಲ. ವಾದ್ಯಘೋಷಗಳ ಗಡಿಬಿಡಿಯಿಂದ ಇಡೀ ಊರು ದುಮುದುಮಿಸುತ್ತಿತ್ತು. ಇಂದೇ ಏಕೆ, ಒಂದು ವಾರದಿಂದ ಇದು ನಡೆದುಬಂದಿದೆ. ಸುತ್ತು ಮುತ್ತಲಿನ ಹಳ್ಳಿಗರು ಇಂಥ ಸಮಾರಂಭವನ್ನು ಕಂಡದ್ದು ಕೇಳಿದ್ದು ಇದೇ ಮೊದಲುಸಾರೆ ಎನ್ನಬಹುದು. ಕಲಕತ್ತೆಯಿಂದ ತರಿಸಿದ ಬೆಂಡು, ಊರಿನ ಓಲಗ ಇವುಗಳಲ್ಲಿ ಒಂದು ತರಹದ ಸ್ಪರ್ಧೆಯೇ ನಡೆದಿತ್ತು. ಈ ಗದ್ದಲದಿಂದ ಮನುಷ್ಯ ಜಾತಿಯ ಆನಂದ ಇಮ್ಮಡಿಯಾಗಿದ್ದರೂ ಪಾಪ! ದನಕರುಗಳ ಅವಸ್ಥೆ ಯಾರಿಗೂ ಬೇಡ!.

— ಇಷ್ಟೆಲ್ಲ ಗದ್ದಲಕ್ಕೆ ಕಾರಣ, ೧೪ ವರ್ಷ ವಯಸ್ಸಿನ ತರುಣನ ವಿವಾಹ ಮಹೋತ್ಸವ! ಸಾಗರಪುರದ ಜಮೀನದಾರ ರಾ| ರಾ| ಹರದೇವ ಮಿತ್ರರ ಏಕಮಾತ್ರ ಪುತ್ರನ ಮದುವೆ. ಹರದೇವ ಮಿತ್ರ ಸಾಧಾರಣನಲ್ಲ, ವರುಷಕ್ಕೆ ೨೫-೩೦ ಸಾವಿರ ಉತ್ಪನ್ನದ ಕುಳ. ಮಗನ ಹೆಸರು ಸತ್ಯೇಂದ್ರ ಕುಮಾರ. ಈತ ಸರಕಾರೀ ಹಾಯಸ್ಕೂಲಿನಲ್ಲಿ Entrance ಪರೀಕ್ಷೆಗೆ ಕೂತಿದ್ದಾನೆ. ಈತನ ತಾಯಿಗೆ ಆದಷ್ಟು ಬೇಗ ಸೊಸೆಯ ಮುಖ ನೋಡುವ ಆತುರ. ಅದಕ್ಕೇನೇ ಆ ಸತ್ಯೇಂದ್ರ ಕುಮಾರನಿಗೆ ಇಷ್ಟು ಸಣ್ಣ ಪ್ರಾಯದಲ್ಲಿ ಮದುವೆ ನಡೆಸಿದ್ದು.

ಸೊಸೆ, ವರ್ಧಮಾನ ಜಿಲ್ಹೆಯ ದಿಲಜಾನಪುರದ ಜಮೀನದಾರ ಶ್ರೀ ಕಾಮಾಖ್ಯಚರಣ ಚೌಧರಿಯ ಕನಿಷ್ಟ ಪುತ್ರಿ—ಅಭಿದಾನ ಸರಲೆ ಎಂದು.

ಮದುವೆ ಸರಾಗವಾಗಿ ನಡೆಯಿತು. ಸೊಸೆ ಸುಂದರಿ. ಇಂದು ಸತ್ಯೇಂದ್ರನಷ್ಟು ಸುಖಿ ಯಾರೂ ಇಲ್ಲ. ಹತ್ತು ವರ್ಷದ ಬಾಲಿಕೆಯ ರೂಪ-ಗುಣ ಕಂಡು ಸತ್ಯೇಂದ್ರನ ತಾಯಿ ಪ್ರಸನ್ನಳಾದಳು. ಮದುವೆಯಾದ ಮರುವರ್ಷವೇ ಹರದೇವ ಬಾಬು ಸೊಸೆಗೆ ಗೃಹಪ್ರವೇಶ ಮಾಡಿಸಿದರು. ಅತ್ತೆಗೆ ಸೊಸೆಯನ್ನು ದೂರವಿಡಿಸುವದು ಬೇಡವಾಗಿತ್ತು.

ಸತ್ಯೇಂದ್ರನ ಶಿಕ್ಷಣಕ್ಕಾಗಿ ಹರದೇವ ಬಾಬು ಪತ್ನಿಯೊಂದಿಗೆ ಕಲಕತ್ತೆಯಲ್ಲಿಯೇ ಬಿಡಾರ ಹೂಡಿದ್ದರು. ಸರಲೆಯೂ ಕಲಕತ್ತೆಗೆ ಬಂದಳು. ಅವಳಿಗೆ

ಪ್ರಾಯ ಕಡಿಮೆ ಹೀಗಾಗಿ ಮಾವನೊಂದಿಗೆ ಆಕೆ ಮಾತಾಡಲು ಕಡಿಮೆ ಮಾಡುತ್ತಿರಲಿಲ್ಲ. ಮಾವನಿಗೂ ಕೂಡ ಮುದ್ದು ಸೊಸೆಯೊಂದಿಗೆ ಚಲ್ಲಾಟ ಬೇಕಾಗಿತ್ತು.

ಕೆಲ ದಿನಗಳಲ್ಲಿಯೇ ಸರಲೆಯ ತಂದೆ ಸರಲೆಯನ್ನು ಕರೆದೊಯ್ದರು. ಹಾಗೂ ಹೀಗೂ ಒಂದೆರಡು ತಿಂಗಳು ಕಳೆದ ಬಳಿಕ ಸತ್ಯೇಂದ್ರ ಸಿಟ್ಟಿಗೆದ್ದ.

"ಪುಸ್ತಕಗಳೆಲ್ಲ ಮೇಜಿನ ಮೇಲೆ ಚಲ್ಲಾಪಿಲ್ಲಿಯಾಗಿ ಬಿದ್ದಿವೆ. ಮಸಿಬೌತಿಯಲ್ಲಿಯ ಮಸಿ ಆರಿ ಎಷ್ಟೋ ದಿನಗಳಾದವು! ಇಂಥ ದೊಡ್ಡ ಮನೆಯಲ್ಲಿ ಇವನ್ನೆಲ್ಲ ಸರಿಪಡಿಸುವವರು, ಯಾರೂ ಇಲ್ಲ....!"

ತಾಯಿ ಮಾತಿನ ಮರ್ಮ ಅರಿತಳು. ಅಂದೇ ರಾತ್ರಿ ಹರದೇವ ಬಾಬುವಿನ ಕಿವಿಗೆ ಈ ಸುದ್ದಿ ಬಿದ್ದಿತು. ಬಾಬು ಬಿದ್ದು ಬಿದ್ದು ನಕ್ಕರು. ಮರುದಿನವೇ ಸೊಸೆಯನ್ನು ಕರೆತರಲು ಒಂದು ಆಳನ್ನು ಕಳಿಸಲಾಯಿತು ಕಾಮಾಕ್ಷ್ಯಚರಣರಿಗೆ ಬರೆದ ಚೀಟಿಯಲ್ಲಿ ಹೀಗಿತ್ತು.

'ಇಲ್ಲಿ ಮನೆಯಲ್ಲಿ ತುಂಬ ಉಪಟಳ ಪ್ರಾರಂಭವಾಗಿದೆ. ಸೊಸೆಯನ್ನು ಕಳಿಸಿದ ಹೊರತು ಗತ್ಯಂತರವಿಲ್ಲ.ಹೀಗಾಗಿ ಆದಷ್ಟು ಬೇಗನೇ ಕಳಿಸಿಕೊಡಿರಿ.'

ಸರಲೇ ಬಂದೇ ಬಂದಳು. ಸತ್ಯೇಂದ್ರನ ಸಣ್ಣಪುಟ್ಟ ಕೆಲಸ ಆಕೆಯದೇ. ಪುಸ್ತಕದ ಧೂಳು ಝಾಡಿಸಿ ಓರಣವಾಗಿ ಇಡಿಸುವದು, ಕಾಲೇಜಿಗೆ ಹೋಗುವಾಗ ಧರಿಸಿಕೊಳ್ಳಲು ಮಡಿಸಿದ ಬಟ್ಟೆಗಳನ್ನು ಹೊತ್ತಿಗೆ ಸರಿಯಾಗಿ ತಂದಿರಿಸುವದು, ಅವುಗಳಿಗೆ ಗುಂಡಿಗಳನ್ನು ಹಾಕಿ ಇರಿಸುವದು, ಕಾಲೇಜಿಗೆ ಹೋಗುವ ಗಡಿಬಿಡಿಯಲ್ಲಿ ಒಂದು ಕಾಲಿಗೆ ಪಠಾಣಿ ಬೂಟು ಮತ್ತೊಂದರಲ್ಲಿ ಸಾದಾ ಷೂ ಹೋಗದಂತೆ ಎಚ್ಚರದಿಂದ ಇರುವದು.... ಇಂಥ ಇನ್ನೂ ಕೆಲವು ಕೆಲಸಗಳನ್ನು ಸರಲೆ ನೋಡಿಕೊಳ್ಳುತ್ತಿದ್ದಳು— ಸರಲೆ ಇರದೆ ಹೋದರೆ, ಆತನ ಗಡಿಬಿಡಿಗೆ ಮಿತಿಯೇ ಇರುತ್ತಿದ್ದಿಲ್ಲ. ಈ ಕೆಲಸಗಳನ್ನು ಬೇರೆ ಯಾರೂ ಮಾಡಿದ್ದರೂ ಅದು ಸತ್ಯೇಂದ್ರನ ಕಣ್ಣಿಗೆ ಹೋಗುತ್ತಿದ್ದಿಲ್ಲ.

# ೨. ಸುಶೀಲೆಯ ಮಗನ ಅನ್ನಪ್ರಾಶನ

ಸುಶೀಲೆ ಸರಲೆಯ ಅಕ್ಕ. ಇಂದು ಮೊದಲ ಸಾರೆ ಆಕೆಯ ಮಗನ ತುತ್ತಿನ ಊಟ-ಅನ್ನ ಪ್ರಾಶನದ ವಿಧಿ. ಹೀಗಾಗಿ ಸರಲೆಯನ್ನು ಕರೆದೊಯ್ಯಲು ಆಕೆಯ ತಂದೆ ಇಂದು ಬೆಳಿಗ್ಗೆ ಕಲಕತ್ತೆಗೆ ಬಂದಿದ್ದಾರೆ.

ಸುಶೀಲೆಯೂ ಕೂಡ ಸರಲೆಗೂ, ಆಕೆಯ ಪತಿ ಸತ್ಯೇಂದ್ರನಿಗೂ ಬರಬೇಕೆಂದು ತುಂಬ ಆಗ್ರಹದ ಪತ್ರ ಬರೆದಿದ್ದಾಳೆ. ಇದಕ್ಕೆ ಕಾರಣವೂ ಇದೆ. ಸರಲೆ ತವರೂರಿಗೆ ಹೋಗದೆ ೨ ವರ್ಷ ಕಳೆದಿವೆ. ಸತ್ಯೇಂದ್ರ ಕೂಡ ಹೊರಡಲು ತಯಾರಾದಾಗ ಶಾಮಾಖ್ಯಬಾಬುವಿಗೆ ತುಂಬ ಆನಂದವಾಯಿತು. ಇಬ್ಬರನ್ನೂ ಕರೆದುಕೊಂಡು ಮರುದಿನ ನಸುಕಿನಲ್ಲಿ ತಮ್ಮ ಊರಿಗೆ ಪ್ರಸನ್ನ ಚಿತ್ತರಾಗಿ ಮರಳಿದರು.

ಸರಲೆಯ ತಾಯಿಗೆ ಸಂಭ್ರಮವೇ ಸಂಭ್ರಮ. ಸುಶೀಲೆ, ಅವಳ ತಾಯಿ ಇಬ್ಬರೂ ಅಳಿಯನ ಸೇವೆಯಲ್ಲಿ ನಿರತರಾದರು. ಸತ್ಯೇಂದ್ರ ಅವರ ಆದರಾತಿಥ್ಯದಿಂದ ಪ್ರಸನ್ನನಾದ.

ಶುಭಕಾರ್ಯ ನಿರ್ವಿಘ್ನವಾಗಿ ಸಮಾಪ್ತವಾಯಿತು. ಸತ್ಯೇಂದ್ರ ಸಾವಕಾಶವಾಗಿ ಹೊರಡುವ ತಯಾರಿ ನಡೆಸಿದ. ಅತ್ತೆಯ ಮುಖ ಚಿಕ್ಕದಾಯಿತು.

“ಇಷ್ಟು ದಿನಗಳನಂತರ ಬಂದಿದ್ದೀರಾ. ೪-೫ ದಿನ ಉಳಿಯಿರಲ್ಲ.” ಎಂದಳು.

ಸರಲೆಯೂ ಬಿಡಲಿಲ್ಲ. ಹಠ ಹಿಡಿದಳು. ಸತ್ಯೇಂದ್ರ ಒಪ್ಪಿಕೊಂಡ.

ನಾಲ್ಕೈದು ದಿನಗಳೂ ಕಳೆದವು. ಸರಲೆಗೆ ಸತ್ಯೇಂದ್ರ ಇನ್ನೆರಡು ದಿನ ಇದ್ದರಾಗುತ್ತಿದ್ದಿಲ್ಲವೇ ಎಂದೆನಿಸಿತು.ಆದರೆ ದಿನ ಕಳೆದರೆ ಸತ್ಯೇಂದ್ರನಿಗೆ ತುಂಬಾ ಕಷ್ಟ. ಅಭ್ಯಾಸ ಹಿಂದೆ ಬೀಳುವದು. ಪರೀಕ್ಷೆಗೂ ದಿನ ಬಹಳ ಕಡಿಮೆ ಇದೆ. ಹೊರಡುವ ಸಮಯದಲ್ಲಿ ಸರಲೆ ಕೇಳಿದಳು.

“ ನನ್ನನ್ನು ಯಾವಾಗ ಕರೆದೊಯ್ಯುವಿರಿ?”

“ ಯಾವಾಗ ಬರುತ್ತೀ ಆವಾಗ” ನಿರ್ವಿಕಾರ ಧ್ವನಿಯಲ್ಲಿ ಹೇಳಿದ.

“ ಹಾಗಾದರೆ ಹತ್ತು-ಹನ್ನೆರಡು ದಿನಗಳಲ್ಲಿ ಕರೆದುಕೊಂಡು ಹೋಗಿರಿ”

ಸತ್ಯೇಂದ್ರನಿಗೆ ಆಶ್ಚರ್ಯವಾಯಿತು. ತಲೆಯೆತ್ತಿ ಹೆಂಡತಿಯ ಕಡೆಗೆ

ನೋಡಿದ. ಅವನು ಈ ರೀತಿ ಎಣಿಸಿರಲಿಲ್ಲ. ಹೀಗಾಗಿ ಆತನಿಗೆ ಆನಂದ ವಾಗಿತ್ತು.

ಸರಲೆ ಕಣ್ಣೊರಿಸಿಕೊಳ್ಳುತ್ತ ಹೇಳಿದಳು.

“ನನ್ನ ಬಗ್ಗೆ ಹೆಚ್ಚು ಯೋಚಿಸಬೇಡಿ. ಮತ್ತು ರಾತ್ರಿ ಹೆಚ್ಚು ಹೊತ್ತು ದೀಪ ಉರಿಸ ಬೇಡಿ.”

ರಾತ್ರಿ ಹತ್ತರೊಳಗೆ ಮಲಗುತ್ತೇನೆಂದು ಸತ್ಯೇಂದ್ರನ ಕಡೆಯಿಂದ ಆಣೆ ಹಾಕಿಸಿದಳು.

ಉದಾಸೀನ ಮನಸ್ಕನಾದ ಸತ್ಯೇಂದ್ರ ಹಾಗೂ ಹೀಗೂ ಕಲಕತ್ತೆ ತಲ್ಪಿದ.

ಮರುದಿನ ಸತ್ಯೇಂದ್ರ, ಒಂದು ಪುಸ್ತಕ ಹಿಡಿದು ಕುಳಿತುಕೊಂಡ. ಆತನಿಗೂ, ಪುಸ್ತಕದ ಪುಟಗಳಿಗೂ ಒಂದು ರೀತಿಯ ದ್ವಂದ್ವವೇ ನಡೆಯಿತು. ಕೊನೆಗೆ ಹತಾಶನಾಗಿ ಆತ ಇಡೀ ದಿನ ಓದಿದ್ದನ್ನು ರಾತ್ರಿ ಲೆಖ್ಖಮಾಡಿ ನೋಡಿದ. ಕೇವಲ ೨೬ ಸಾಲು ಓದಿದ್ದಾನೆ! ಪಾಪ! ಆತನಾದರೂ ಏನು ಮಾಡಬಲ್ಲ? ಯೋಚಿಸಿ ಯೋಚಿಸಿ ಕೊನೆಗೆ ಆತ ತಪ್ಪು ಸರಲೆಯದೇ ಎಂದು ನಿರ್ಣಯಿಸಿದ. ಕೊಂಚ ಸಿಟ್ಟೂ ಬಂದಿತು ಆತನಿಗೆ. ಅವಳು ಇಲ್ಲದಿದ್ದಾಗ ಅಭ್ಯಾಸ ಚೆನ್ನಾಗಿ ಆಗಬಹುದು ಎಂದು ತಿಳಿದಿದ್ದ. ಇದೇ ರೀತಿ ೫-೬ ದಿನಗಳು ಉರುಳಿದವು. ಪರೀಕ್ಷೆಯ ನೆನಪಾಗಿ ಸತ್ಯೇಂದ್ರ ಸ್ವಲ್ಪ ಬೆದರಿದ. ಮರುದಿನವೇ ಕರೆದು ತರುವೆನೆಂದು ಆತ ಆ ದಿನ ನಿರ್ಧರಿಸಿದ. ಆದರೆ.......

ಕರೆದು ತರಲು ಏನಾದರೂ ಯುಕ್ತಿ ಹೂಡಬೇಕಾಯಿತಲ್ಲ? ಮತ್ತೆ ಅಲ್ಲಿ ಹೋಗಿ ಬಾ ಎಂದು ಹೇಳುವದಾದರೂ ಹೇಗೆ? ಹೆಂಡತಿಯನ್ನು ಬಿಟ್ಟು ಎರಡು ದಿನ ಇರಲಾರ ಎಂದು ತನ್ನನ್ನು ಕೆಣಕಬಹುದು. ಛೀ! ಏನಾದರೂ ಮಾಡಬೇಕು...........

ಹೀಗೆ ಯೋಚಿಸುತ್ತ ಕುಳಿತಿದ್ದಾಗ ಮನೆಯ ಆಳು ಒಂದು ತಾರು ತಂದು ಕೊಟ್ಟು ಹೋದ. ಸತ್ಯೇಂದ್ರನಿಗೆ ಕೊಂಚ ಆಶ್ಚರ್ಯವಾಯಿತು— ಒಡೆದು ನೋಡಿದ.

“ಸರಲೆಗೆ ಬೇನೆ ಕೂಡಲೆ ಬನ್ನಿರಿ.”

ರಾಮಾಖ್ಯಬಾಬು

ಆಕಾಶವೇ ಕಳಚಿ ಬಿದ್ದಂತಾಯಿತು ಸತ್ಯೇಂದ್ರನಿಗೆ. ತಲೆಯ ಮೇಲೆ ಕೈಹೊತ್ತುಕೊಂಡು ಖುರ್ಚಿಯಲ್ಲಿ ಕುಸಿದು ಬಿದ್ದ. ಕೋಣೆಯಲ್ಲಿಯ ಕಪಾಟು ಕನ್ನಡಿ, ಟೇಬಲ್ಲುಗಳೆಲ್ಲ ತನ್ನ ಸುತ್ತಲೂ ತಿರುಗುತ್ತಿವೆಯೆಂಬಂತೆ ಭಾಸವಾಯಿತು. ಆತನಿಗೆ. ಆತ ಸಹಿಸಲಾರದೆ ಕಣ್ಣು ಮುಚ್ಚಿ ಬಿದ್ದುಕೊಂಡ.

ಅದೇ ದಿನವೇ ಹರದೇವಬಾಬು ಮಗನನ್ನು ಕರೆದುಕೊಂಡು ದಿಲಜಾನಪುರಕ್ಕೆ ಹೊರಟರು.

ಮನೆಯ ಎದುರಿಗೆ ಮಾವನ ಭೆಟ್ಟಿಯಾಯಿತು. ದೂರದಲ್ಲಿರುವಾಗಲೇ ಹರದೇವಬಾಬು ಕೂಗಿದರು.

"ಸೊಸೆ ಹೇಗಿದ್ದಾಳೆ ?"

ಕಾಮಾಖ್ಯಬಾಬು ಪಿಟ್ಟೆನ್ನಲಿಲ್ಲ. ಕಣ್ಣಂಚಿನಲ್ಲಿ ಮಿಂಚಿದ ಎರಡು ಹನಿಗಳನ್ನು ಒರೆಸಿ ಹರದೇವಬಾಬು ಸತ್ಯೇಂದ್ರರನ್ನು ಒಳಗೆ ಕರೆದೊಯ್ದರು.

ಹರದೇವಬಾಬು ಸೊಸೆ ಮಲಗಿದ ಕೋಣೆಗೆ ಹೋಗಿ ನೋಡಿದರು. ಸೊಸೆ ಸೊರಗಿ ಕಡ್ಡಿಯಂತಾಗಿದ್ದಾಳೆ. ಕಣ್ಣುಗಳು ಒಳಸೇರಿ ಮುಖದ ಮೇಲೆಲ್ಲ ನೈಲಿ ಎದ್ದಿದೆ. ಜ್ವರದಿಂದ ಕಣ್ಣುಗಳು ಉರಿಯುವ ಕೆಂಡದಂತೆ ತೋರುತ್ತಿವೆ. ಹರದೇವಬಾಬು ನಿಮಿಷಮಾತ್ರದಲ್ಲಿ ಪರಿಸ್ಥಿತಿಯನ್ನು ಅರಿತುಕೊಂಡರು. ಕಣ್ಣೊರಸಿಕೊಳ್ಳುತ್ತ ಮೃದುವಾಗಿ ಕರೆದರು.

"ಮಗೂ, ಸರಲಾ,"

ಸರಲೆ ಎಲ್ಲೋ ನೋಡುತ್ತಿದ್ದವಳು ಮಾವನ ಕಡೆಗೆ ನೋಡಿದಳು ಕ್ಷೀಣವಾಗಿ ನಕ್ಕಳು.

"ಹೇಗನಿಸುತ್ತದೆ ಮಗೂ ?"

ಕೇಳುವಂಥ ಪ್ರಶ್ನೆಯೇ ಇದು ? ಹರದೇವಬಾಬುವಿಗೂ ಅನಿಸಿತ್ತು. ಕೇಳಬಾರದೆಂದು. ಆದರೂ ಏನಾದರೂ ಮಾತಾಡಬೇಕಲ್ಲ.

"ಚನ್ನಾಗಿಯೇ ಇದ್ದೇನೆ."

ಪ್ರಶ್ನೆಗೆ ತಕ್ಕ ಉತ್ತರ—ಇಬ್ಬರೂ ಅರಿತುಕೊಂಡರು. ಎಲ್ಲರೂ ಎದ್ದುಹೋದ ಬಳಿಕ ಸತ್ಯೇಂದ್ರ ಬಂದು ಹಾಸಿಗೆಯ ಬಳಿ ಕುಳಿತುಕೊಂಡ. ಆತನ ಕಂಠ ಬಿಗಿದು ಬಂದಿತ್ತು. ಮಾತಾಡಲಾಗಲಿಲ್ಲ. ಬಹಳ ಹೊತ್ತು ಆತ ಸರಲೆಯನ್ನು ದಿಟ್ಟಿಸಿದ.

ಕೊನೆಗೆ ಒಣಗಿದ ಸ್ವರದಿಂದ ಕರೆದ.

"ಸರಲಾ"

.......ಹೌದು ಸ್ವರವೇನೋ ಪರಿಚಿತ—ನೀರಸವಾದ ಸ್ವರ. ತುಂಬ ಒಣಗಿದೆ......ಆದರೆ ಅದರಲ್ಲಿ ಪ್ರೀತಿಯ ಅಂಥ ಕೊಂಚ ಇದೆ.......ಹೌದು ಅವರೇ ! ಸರಲೆ ಸಾವಕಾಶವಾಗಿ ಕಣ್ಣು ತೆರೆದಳು—ಹರದೇವ ಬಾಬುವನ್ನು ಕಂಡಾಗಲೇ ಆಕೆ ಸತ್ಯೇಂದ್ರ ಬಂದಿರಬಹುದೆಂದು ಅನುಮಾನ ಮಾಡಿದ್ದಳು.

ಸರಲೆಗೆ ಗಂಡನನ್ನು ಚೇಷ್ಟೆ ಮಾಡುವದೆಂದರೆ ತುಂಬಾ ಪ್ರೀತಿ. ಇಂಥ ಪರಿಸ್ಥಿತಿಯಲ್ಲೂ ಆಕೆ ನಗುತ್ತ ಕೆಣಕಿದಳು.

"ಕರೆದೊಯ್ಯಲು ಬಂದಿರುವಿರಾ ?"

ಹೇಗಾದರೂ ಇಷ್ಟು ಹೊತ್ತಿನತನಕ ಆತ ಕಣ್ಣೀರು ತಡೆದುಕೊಂಡಿದ್ದ. ಸರಲೆಯ ಸ್ಥಿತಿ ನೋಡಿ ಆತನಿಗೆ ತಡೆಯಲಾಗಲಿಲ್ಲ. ಗೊಳೋ ಎಂದು ಅತ್ತುಬಿಟ್ಟ.

ಇಂಥ ಪರಿಸ್ಥಿತಿಯಲ್ಲಿ ಅಳಬಾರದೆಂದು ಸತ್ಯೇಂದ್ರನಿಗೆ ಗೊತ್ತಿತ್ತು. ಆದರೆ ಆತನೇನು ಮಾಡಬಲ್ಲ? ಅಸಹಾಯ ಪರಿಸ್ಥಿತಿ. ಅದರ ಒಂದು ಮಾತು, ಇಂಥ ಸಂದರ್ಭ ಇನ್ನುವರೆಗೆ ಇಬ್ಬರಿಗೂ ಬಂದಿರಲಿಲ್ಲ. ಪತಿ ಅತ್ತಿದ್ದನ್ನು ಸರಲೆ ಇಂದಿನವರೆಗೆ ನೋಡಿರಲಿಲ್ಲ. ಅವಳೂ ಮನಸಾ ಅತ್ತಳು. ಬಹಳ ಹೊತ್ತಿನ ಮೇಲೆ ಕಣ್ಣೊರಿಸಿಕೊಳ್ಳುತ್ತ ನುಡಿದಳು.

"ಛೀ ! ಇದೇನು ? ಗಂಡಸಾಗಿ ಅಳುವದೆಂದರೇನು ? ಬಿಡಿ."

"ಇದೇನು ? ಸರಲಾ ? ಹೀಗೆ ಕೇಳುತ್ತಿ, ಕಣ್ಣೀರಾದರೂ ಬಂದರೆ ಕೊಂಚ ಸಮಾಧಾನವಾಗುವದು. ಹೃದಯ ಹಗುರಾಗುವದು. ದುಃಖದಿಂದ ಕಣ್ಣೀರು ಬತ್ತಿ ಹೋದರೆ......"—" ಆತನಿಗೆ ದುಃಖ ಒತ್ತರಿಸಿ ಬಂದಿತು. ಮುಂದೆ ಮಾತನಾಡಲಾಗಲಿಲ್ಲ. ಗಂಟಲಿನ ನರಗಳು ಉಬ್ಬಿ ಬಂದಿದ್ದವು. ಕಣ್ಣು ಕೆಂಪಗಾಗಿದ್ದವು.

ಸರಲೆ ಸಾವಕಾಶವಾಗಿ ತನ್ನ ಕೈಯನ್ನೆತ್ತಿ ಪತಿಯ ತೊಡೆಯನ್ನು ನೇವರಿಸಿದಳು. ಸತ್ಯೇಂದ್ರ ಆ ಕೈಯನ್ನು ತನ್ನ ಎರಡೂ ಕೈಗಳಿಂದ ಗಟ್ಟಿಯಾಗಿ ಅಮುಕಿದ.

"ಪುನರ್ಜನ್ಮದಲ್ಲಿ ವಿಶ್ವಾಸವಿದೆಯೇ ?" ಅನಿರೀಕ್ಷಿತವಾಗಿ ಕೇಳಿದಳು ಸರಲಾ.

"ಪುನರ್ಜನ್ಮ ಇದೆಯೋ ಇಲ್ಲವೋ ಗೊತ್ತಿಲ್ಲ. ಆದರೆ ಇಂದಿನಿಂದ ವಿಶ್ವಾಸವಿಡಬೇಕಾಗಿ ಬಂದಿದೆ." ಬಿಕ್ಕುತ್ತ ನುಡಿದ ಸತ್ಯೇಂದ್ರ.

ಸರಲೆಯ ಮುಖದ ಮೇಲೆ ಒಂದು ಮಸುಕಾದ ಮುಗುಳ್ನಗೆ ಹಾದು ಹೋಯಿತು.

ಔಷಧ ಕುಡಿಸುವ ಹೊತ್ತಿಗೆ ಕಾಮಾಖ್ಯಬಾಬು, ಹರದೇವಬಾಬು ಡಾಕ್ಟರರ ಜೊತೆಯಲ್ಲಿ ಸರಲೆಯ ಕೊಠಡಿಯನ್ನು ಪ್ರವೇಶಿಸಿದರು.

ಡಾಕ್ಟರ ನಾಡಿಯನ್ನು ಹಿಡಿದು ಕೊಂಚ ಹೊತ್ತು ಯೋಚಿಸಿದ. ಹೊರಗೆ ಬಂದ ಮೇಲೆ ಹರದೇವಬಾಬುವಿನ ಕಿವಿಯಲ್ಲಿ ಪಿಸುಗುಟ್ಟಿದ.

"ಪರಿಸ್ಥಿತಿ ಚಿಂತಾಜನಕ. ಕೊನೆಗೆ ಪ್ರೈವೇಟ್."

ಮರುದಿನ ನಸುಕಿನಲ್ಲಿ ಭಗವಂತನ ಅನುಗ್ರಹದಿಂದ ಸರಲೆಯ ಪ್ರಾಣೋತ್ಕ್ರಮಣವಾಯಿತು !

ಉತ್ತರ ವಿಧಿಗಳನ್ನೆಲ್ಲ ಮುಗಿಸಿ ಅದೇ ದಿನ ಸಾಯಂಕಾಲ ಹರದೇವ ಬಾಬು ಸತ್ಯೇಂದ್ರನೊಂದಿಗೆ ಕಲಕತ್ತೆಗೆ ಬಂದರು.

# ೩—ಮರುಮದುವೆ

ಏನಾಗಿದೆಯೋ ಯಾರು ಬಲ್ಲರು ? ಹಂಸತೂಲಿಕಾ ತಲ್ಪದಲ್ಲಿ ಮಲಗಿ ಸುಖ ನಿದ್ದೆಯನ್ನು ಸವಿಯುತ್ತಿರುವಾಗ ಒಮ್ಮೆಲೆ ತಿವಿದೆಬ್ಬಿಸಿ ನಿದ್ರೆಯನ್ನು ಕೆಡಿಸಿದಂತಾಗಿದೆ.

ಸತ್ಯೇಂದ್ರನ ಕೋಣೆಯಲ್ಲಿ ಇನ್ನೂ ದೀಪ ಉರಿಯುತ್ತಲೇ ಇದೆ. ಮಧ್ಯರಾತ್ರಿಯಲ್ಲಿ ಹಾಸಿಗೆಯಲ್ಲಿ ಕುಳಿತು ಸತ್ಯೇಂದ್ರ ಯೋಚಿಸುತ್ತಲೇ ಇದ್ದಾನೆ. ಇದ್ದಕ್ಕಿದ್ದಂತೆ ಆತನ ನಿದ್ದೆ ಮಾಯವಾಗಿ ಬಿಟ್ಟಿದೆ. ತನ್ನ ಸಹ ಧರ್ಮಿಣಿಯೊಂದಿಗೆ ಮಲಗಿದ ಅದೇ ಮಂಚದಲ್ಲಿ ಆತ ಕುಳಿತಿದ್ದಾನೆ. ಒಬ್ಬಂಟಿಗ ! ಅಳಲೋ, ನಗಲೊ ! ಛೇ !

ಒಂದು ಸಾರೆ ತಲೆಯನ್ನು ಕೊಡವಿದ ಸತ್ಯೇಂದ್ರ.

ಯಾವದೋ ಪ್ರವಾಹದಲ್ಲಿ ಆತ ತೇಲಿ ಹೋಗುತ್ತಿದ್ದಾನೆ. ಮೊದಲೇ ಆತನ ದೋಣಿ ಮುಗುಚಿ ಬಿದ್ದಿದೆ. ತುಂಬ ಸೋತಿದ್ದಾನೆ. ಸಾಧ್ಯವಿಲ್ಲ ! ಇಲ್ಲ........ಬದುಕಿದುವದು ಸಾಧ್ಯವಿಲ್ಲ. ಜೀವನದ ಕೇಂದ್ರದೆಡೆಗೆ ಯಾರೋ ತನ್ನನ್ನು ಎಳೆದುಕೊಂಡು ಒಯ್ಯುತ್ತಿದ್ದಾರೆ. ಏನೂ ತೋಚುವದಿಲ್ಲ !.......

ಗಾಢಾಂಧಕಾರದ ಮಧ್ಯರಾತ್ರಿಯಲ್ಲಿ ಸತ್ಯೇಂದ್ರ ಕಿಡಕಿಯಿಂದ ಹೊರಗೆ ನೋಡಿದ. ಕಿಂಚಿತ್ ಸಹ ಗಾಳಿಯಿಲ್ಲದ ರಾತ್ರಿಯದು. ಗಿಡಮರಗಳೆಲ್ಲ ನಿಸ್ತಬ್ಧವಾಗಿವೆ. ಸತ್ಯೇಂದ್ರನ ಸ್ಥಿತಿಯೂ ಅದೇ ಆಗಿದೆ.

ಎಲ್ಲಿಂದಲೋ ಏನೋ ಒಮ್ಮೆಲೆ ಸುಯ್ಯೆಂದು ಇರುಳುಗಾಳಿ ಕೊಂಚ ಮರಗಳನ್ನು ಅಲುಗಿಸಿತು. ಸತ್ಯೇಂದ್ರನಿಗೂ ಅದರ ಅನುಭವವಾಯಿತು. ಗಾಳಿಯು ಕಿವಿಯಲ್ಲಿ ಏನೋ ಉಸುರಿದಂತೆ ಭಾಸವಾಯಿತು. ಆತನಿಗೆ ಏನು ಹೇಳಿರಬಹುದು ? ಎಲ್ಲ ವಸ್ತುಗಳು ಅದನ್ನೇ ಹೇಳುತ್ತಿವೆ. ಕೋಣೆಯಲ್ಲಿಯ ಮಂಚ, ಕಪಾಟು, ಕನ್ನಡಿ, ಅದೇಕೆ ಈ ಕಿಡಕಿ, ಇದೇ ತಾನೆ ಸುಳಿದ ತಂಗಾಳಿ ಎಲ್ಲವೂ ಅದನ್ನೇ ಪದೇ ಪದೇ ಹೇಳುತ್ತಿವೆ. 'ಆಕೆ ಸತ್ತು ಹೋದಳು.' ಹಕ್ಕಿಗಳು ಅದನ್ನೇ ನುಡಿಯುತ್ತವೆ. ಕೋಗಿಲೆಯೂ 'ಸ-ರ-ಲೇ' ಎಂದು ಕೂಗುತ್ತದೆ. ಮತ್ತು ಈ ಗಾಳಿ. ಅದೂ ಸಹ.......

ಸತ್ಯೇಂದ್ರ ಧೊಪ್ಪೆಂದು ಕುಳಿತಲ್ಲಿ ಮಂಚದ ಮೇಲೆ ಮಗುಚಿ ಬಿದ್ದ. ಸರಲೆಯ ನೆನಪಿನಿಂದ ಆತನ ಕಣ್ಣುಗಳು ತುಂಬಿ ಬಂದವು.

.........ಆ ಮಾತಿಗೆ ಇಂದು ಅನೇಕ ದಿನಗಳಾಗಿವೆ. ಆದರೂ ಆತನ ಗಾಯ ಮಾದಿಲ್ಲ. ರಾತ್ರಿಯಿಡೀ ಸರಲೆಯ ನೆನಪಿನಿಂದ ನಿದ್ದೆಗೆಟ್ಟು ನಸುಕಿನಲ್ಲಿ:ಜೊಂಪು ಹತ್ತಿ ಬೆಳಗ್ಗೆ ಎದ್ದಾಗ ದಿನವೂ ಸರಲೆಯನ್ನು ನೋಡಲು ಯತ್ನಿಸುತ್ತಿದ್ದ ಆತ. ದಿನದ ಬೆಳಕು ಆತನಿಗೆ ಸೇರುವದಿಲ್ಲ. ಬೆಳದಿಂಗಳಂತೂ ಆತನಿಗೆ ದೂರವೇ.

ಸತ್ಯೇಂದ್ರ ಈಗ ಎಮ್. ಎ. ಫೇಲಾಗಿದ್ದಾನೆ. ಇನ್ನು ಮುಂದೆ ಉತ್ತೀರ್ಣನಾಗುವ ಆಶೆಯನ್ನೂ ಆತ ಇಟ್ಟುಕೊಂಡಿಲ್ಲ. ಉತ್ಸಾಹ ಕಮರಿ ಹೋಗಿದೆ. ಪಾಸಾದರೇನು, ಸತ್ತವರು ತಿರುಗಿ ಬರುವರೇ ?

ಹರದೇವಬಾಬು ಸಪರಿವಾರ ಕಲಕತ್ತೆ ಬಿಟ್ಟು ನಾಗಪುರಕ್ಕೆ ಬಂದಿದ್ದರು. ಮನೆಯಲ್ಲೇ ಅಭ್ಯಾಸ ಮಾಡಿ ಪರೀಕ್ಷೆ ಕೊಡುತ್ತೇನಾಗಿ ನುಡಿದಿದ್ದ ಸತ್ಯೆಂದ್ರ. ಹರದೇವಬಾಬುವಿಗೆ ಆತ ಪಾಸಾಗುವ ಆಶೆ ಇರಲಿಲ್ಲ. ಮಗನ ಮನಸ್ಸೇಕೆ ನೋಯಿಸಬೇಕೆಂದು ‘ ಹುಂ ’ ಎಂದಿದ್ದರು. ಸತ್ಯೇಂದ್ರ ಇತ್ತೀಚಿಗೆ ಯಾರೊಡನೆಯೂ ಹೆಚ್ಚಿಗೆ ಮಾತಾಡುವದಿಲ್ಲ. ಅಷ್ಟಕ್ಕಷ್ಟೆ. ಅವನ ಮೋರೆ ನೋಡಿದರೆ ತಿಂಗಳುಗಟ್ಟಲೆ ಉಪವಾಸ ಮಾಡಿದವನಂತೆ ತೋರುತ್ತದೆ.

ಮಧ್ಯಾಹ್ನ ಸತ್ಯೇಂದ್ರ ತನ್ನ ಕೋಣೆಯಲ್ಲಿ ಮೇಜಿನ ಮೇಲಿನ ಧೂಳು ಝಾಡಿಸುತ್ತಿದ್ದ. ಹಳೆಯ ಫೋಟೋಗಳನ್ನು ಉಜ್ಜಿ ಇಡುತ್ತಿದ್ದ. ಸರಲೆಯ ಕೆಲವು ಪುಸ್ತಕಗಳನ್ನೂ ಕಾಗದಗಳನ್ನೂ ಜೋಪಾನವಾಗಿ ಇರಿಸಿಕೊಂಡಿದ್ದ ಆತ ದಿನವೂ ಒಂದು ಬಿಳಿಯ ಹಾಳೆ, ಪೆನ್ನನ್ನು ತೆಗೆದುಕೊಂಡು ಸರಲೆಗೆ ಕಾಗದ ಬರೆಯುತ್ತಿದ್ದ ! ಬರೆದು ಮುಗಿದ ಮೇಲೆ ಅದನ್ನು ಮಡಿಸಿ ಒಂದು ಪೆಟ್ಟಿಗೆಯಲ್ಲಿ ಇಡುತ್ತಿದ್ದ ! ಪಾಪ ! ಸರಲೆ ಇಲ್ಲವೆಂಬ ಭಾವನೆ ಆತನಲ್ಲಿ ಸುಳಿಯುತ್ತಲೇ ಇರಲಿಲ್ಲ. ಹಾಗೆ ಒಮ್ಮೊಮ್ಮೆ ಈ ವಿಚಾರ ಸುಳಿದಾಗ ಸಾವಿರ ಮುಳ್ಳು ಚುಚ್ಚಿದ ವೇದನೆಯಾಗುತ್ತಿತ್ತು. ಈ ವಯಸ್ಸಿನಲ್ಲಿ ಈ ತರದ ದುಃಖ—ಛೇ ! ಯಾವುದಕ್ಕೂ ಒಂದು ಮಿತಿ ಎಂಬುದು ಇದೆ.

ಸತ್ಯೇಂದ್ರನ ತಾಯಿ ಎಲ್ಲವನ್ನೂ ಬಲ್ಲಳು. ಒಂದು ದಿನ ಆಕೆ ಪತಿಯೊಡನೆ ಮಾತು ತೆಗೆದಳು.

"ಸತ್ಯೇಂದ್ರ ಹೇಗಾಗಿದ್ದಾನೆ, ನೋಡಿದಿರಾ ?"

"ನೋಡುತ್ತಿದ್ದೇನೆ. ಆದರೆ ಯಾರೇನು ಮಾಡಬಲ್ಲರು ?" ಒಣಗಿದ ಸ್ವರದಿಂದ ಹರದೇವಬಾಬು ನುಡಿದರು.

"ಇದ್ದದ್ದೀಗ ಒಂದೇ. ಮರುಮದುವೆ. ಒಳ್ಳೆಯ ಹೆಂಡತಿ ಬಂದ ಮೇಲೆ ನೋಡೀರಂತೆ ನನ್ನ ಸತ್ಯನನ್ನು !"

ಅದೇ ದಿನ ಸತ್ಯೇಂದ್ರ ಊಟ ಮಾಡುತ್ತಿದ್ದಾಗ ತಾಯಿ ಮಮತೆಯಿಂದ ಕರೆದಳು.

"ಮಗೂ,"

ಮೌನವಾಗಿ ಊಟ ಮಾಡುತ್ತಿದ್ದ ಸತ್ಯೇಂದ್ರ ತಲೆ ಮೇಲೆಕ್ಕೆತ್ತಿದ.

"ಮಗೂ, ನನ್ನದೊಂದು ಮಾತು ನಡೆಸಿಕೊಡು."

"ಅದೇನಮ್ಮಾ ?" ಸತ್ಯೇಂದ್ರ ಕೊಂಚ ಆಶ್ಚರ್ಯದಿಂದ ಕೇಳಿದ.

"ನೀನೀಗ ಮದುವೆ ಮಾಡಿಕೊಳ್ಳಬೇಕು."

ಸತ್ಯೇಂದ್ರ ಒಣನಗೆ ನಕ್ಕ.

"ಅದೆಲ್ಲ ಈಗೇಕೆ ? ಈ ವಯಸ್ಸಿನಲ್ಲಿ ?"

ತಾಯಿ ಮೊದಲೇ ಕಣ್ಣೀರನ್ನು ತಡೆಗಟ್ಟಿಕೊಂಡೇ ಮದುವೆಯ ಮಾತು ತೆಗೆದಿದ್ದಳು. ಈಗ ಆಕೆ ಮಾತಾಡುವ ಮೊದಲೇ ಕಣ್ಣುಗಳಿಂದ ಹನಿಗಳು ಉದುರಿದವು.

ಸೆರಗಿನಿಂದ ಒರೆಸಿಕೊಂಡು ಆಕೆ ನುಡಿದಳು.

"ಇಪ್ಪತ್ತೆರಡನೇ ವಯಸ್ಸೆಂದರೆ ಏನು ಮಹಾ ! ಆದರೆ........ಮಗೂ, ಮದುವೆಯೆಂದರೆ ಸರಲೆಯ ಮುಖ ಎದುರಿಗೆ ಬರುತ್ತದೆ. ಆದರೆ........ಈಗ ನಾನಿದನ್ನು ತಡೆಯಲಾರೆ."

ಮರುದಿನ ಹರದೇವಬಾಬು ಸಹ ಸತ್ಯೇಂದ್ರನಿಗೆ ಇದನ್ನೇ ಹೇಳಿದರು. ಸತ್ಯೇಂದ್ರ ಏನೂ ನುಡಿಯಲಿಲ್ಲ. ಹರದೇವಬಾಬು ತಿಳಿದುಕೊಂಡರು. ಮೌನಂ ಸಮ್ಮತಿ ಲಕ್ಷಣಮ್ !

ಸತ್ಯೇಂದ್ರ ತನ್ನ ಕೋಣೆಗೆ ಹೋಗಿ ಸರಲೆಯ ಫೋಟೋ ಕೈಗೆತ್ತಿಕೊಂಡ.

"ಕೇಳಿದಿಯಾ, ಸರಲಾ, ನನ್ನ ಮದುವೆಯಂತೆ !"

ಸರಲೆ ಮಾರ್ನುಡಿಯಲಿಲ್ಲ. ಅವಳಿದ್ದರೂ 'ಹೂಂ.' ಅನ್ನುದ್ದಳೇ ವಿನಾ 'ಬೇಡ' ಅನ್ನುವದು ಅಶಕ್ಯವಾಗಿತ್ತು.

# ೪—ನಲಿನಿ

ಈ ಸಲದ ಮದುವೆ ಕಲಕತ್ತೆಯಲ್ಲಿಯೇ ಆಯಿತು. ಮದುವೆಯ ಹೊತ್ತಿಗೆ ಕನ್ಯೆಯನ್ನು ನೋಡಿ ಸತ್ಯೇಂದ್ರ ಅವಳ ರೂಪ ಮೆಚ್ಚಿದ್ದ. ಆತ ಯೋಚಿಸಿದ, ಸುಂದರವಾದರೇನು? ಅದೂ ಹೊರೆಯೇ ಅಲ್ಲವೇ?

ಮದುವೆಯಾದ ಮೇಲೆ ಎರಡು ವರ್ಷ ನಲಿನಿ ತವರುಮನೆಯಲ್ಲಿಯೇ ಇದ್ದಳು. ಮೂರನೇ ವರ್ಷ ಅತ್ತೆಮನೆಯನ್ನು ಆಕೆ ಪ್ರವೇಶಿಸಿದಳು. ಅತ್ತೆ ಹೊಸ ಸೊಸೆಯ ಸುಂದರ ರೂಪವನ್ನು ನೋಡಿ ಹಳೆಯ ಸೊಸೆಯನ್ನು ಮರೆಯುವ ಪ್ರಯತ್ನ ಮಾಡಿದಳು. ರಾತ್ರಿ ಸತ್ಯೇಂದ್ರ, ನಲಿನಿ ಮಲಗುತ್ತಿದ್ದುದು ಒಟ್ಟಿಗೇನೇ. ಆದರೆ ಅವರಲ್ಲಿ ಮಾತುಕತೆಗಳು ಆಗುತ್ತಿರಲಿಲ್ಲ.

ನಲಿನಿ, ಹೀಗೇಕೆ, ಈ ಅನ್ಯ ಮನಸ್ಕತೆ ಏಕೆ ಎಂದು ವಿಚಾರ ಮಾಡಿಯೇ ಮಾಡಿದಳು.

ಸತ್ಯೇಂದ್ರನೂ ಯೋಚಿಸಿದ್ದ. ನನ್ನ ಸರಲೆಯ ಸ್ಥಳ ಆಕ್ರಮಿಸಿದ ಈಕೆ ಯಾರು?

ಹೊಸಪತ್ನಿ ಲಜ್ಜೆಯಿಂದ ಪತಿಯೊಡನೆ ಮಾತಾಡುವದಿಲ್ಲ. ಮಾತಾಡದಿದ್ದರೇನೇ ಒಳ್ಳೆಯದು ಎಂದುಕೊಂಡ ಸತ್ಯೇಂದ್ರ.

ಒಂದುದಿನ ರಾತ್ರಿ ಸತ್ಯೇಂದ್ರನಿಗೆ ಎಚ್ಚರವಾಯಿತು. ಪಕ್ಕದ ಹಾಸಿಗೆ ನೋಡಿದ. ಯಾರೂ ಇರಲಿಲ್ಲ. ಸ್ವಲ್ಪ ಹೊತ್ತು ಕಣ್ಣು ಬಿಟ್ಟು ನೋಡಿದ. ಯಾರೋ ಕಿಡಕಿಯ ಬಳಿ ನಿಂತಂತೆ ಕಂಡಿತವನಿಗೆ. ನಿದ್ದೆಯ ಮಬ್ಬಿನಲ್ಲಿ, ಚಂದ್ರನ ಮಂದಪ್ರಕಾಶದಲ್ಲಿ ಆ ಮೂರ್ತಿ ಸುಂದರವಾಗಿ ಕಂಡಿತು. ಆತ ಕಿವಿ ನೆಟ್ಟಗೆ ಮಾಡಿ ಕೇಳಿದ. ನಲಿನಿ ಅಳುತ್ತಿದ್ದಳು.

"ನಲಿನಿ" ಸತ್ಯೇಂದ್ರ ಕರೆದ.

ಆಕೆ ಬೆಚ್ಚಿ ಬಿದ್ದಳು. ಸಾಕ್ಷಾತ್ ಪತಿದೇವನೇ ಕರೆಯುತ್ತಿದ್ದಾನೆ! ನಿರಾಕರಿಸುವದೇ? ಛೇ!—ಆಕೆ ಸಾವಕಾಶವಾಗಿ ಮಂಚದ ಸಮೀಪಕ್ಕೆ ಬಂದಳು. ಆತನ ಪಕ್ಕದಲ್ಲಿ ಕುಳಿತಳು.

"ಅಳುತ್ತೀಯಾ?"

ಇಷ್ಟೊಂದದ್ದೇ ತಡ,ಅಳು ದ್ವಿಗುಣಿತವಾಯಿತು. ಆಕೆಯ ಜನ್ಮದಲ್ಲಿ ಇದೇ ಪತಿಯ ಪ್ರೇಮದ ಪ್ರಥಮ ಮಾತುಗಳು !

ಬಹಳ ಸಮಯ ಹೀಗೆ ಅತ್ತು ಅತ್ತು ಹೃದಯ ಹಗುರಾದ ಮೇಲೆ ನಲಿನಿ ಪ್ರಶ್ನಿಸಿದಳು.

"ನಿಮಗೆ ನನ್ನನ್ನು ಕಂಡರೆ ಆಗುವದಿಲ್ಲವೆ ?"

ಈಗ ಸತ್ಯೇಂದ್ರ ಪಾಳಿ ! ಆದರೂ ಆತ ಸ್ಥಿರಿಸಿಕೊಂಡು ನುಡಿದ.

"ಛೇ ! ಹಾಗೇನಿಲ್ಲ. ಆದರೆ ಇಷ್ಟೇ, ನಿನ್ನ ಸಮಾಚಾರ ತೆಗೆದುಕೊಳ್ಳುವದು ನನ್ನಿಂದಾಗದು."

ನಲಿನಿ ಮಾರ್ನುಡಿಯಲಿಲ್ಲ. ಕೇಳುತ್ತಲೇ ಇದ್ದಳು.

ಸತ್ಯೇಂದ್ರ ಕೊಂಚ ಹೊತ್ತು ಧೇನಿಸಿಕೊಂಡು ಹೇಳತೊಡಗಿದ.

"ಯಾರಿಗೂ ಈ ಮಾತು ಹೇಳಬಾರದು ಎಂದುಕೊಂಡಿದ್ದೆ, ಆದರೆ ಅದರಿಂದೇನೂ ಲಾಭವಿಲ್ಲ. ನಿನ್ನಿಂದೇನೂ ನಾನು ಮುಚ್ಚಿಡುವದಿಲ್ಲ. ನನ್ನ ಕಥೆ ತಿಳಿದ ಮೇಲೆ ನಿನಗೆ ನಾನು ಹೀಗೇಕೆ, ಎಂದು ತಿಳಿಯಬಹುದು. ಈಗಲೂ ಮುಂದೆಯೂ ನನ್ನ ಸರಲೆಯನ್ನು ಮರೆಯುವದು ಶಕ್ಯವಿಲ್ಲ ನನ್ನಿಂದ. ಹಾಗೆ ಮರೆಯುವ ಇಚ್ಛೆಯೂ ನನಗಿಲ್ಲ. ನೀನು ಒಬ್ಬ ದುರ್ಭಾಗ್ಯನಿಗೆ ಗಂಟು ಬಿದ್ದಿದ್ದೀಯಾ. ನಿನ್ನನ್ನು ಸುಖಿಯಾಗಿ ಮಾಡುವ ಆಸೆ ನಾನು ಇಟ್ಟುಕೊಂಡಿಲ್ಲ. ನಾನು ನನ್ನ ಇಚ್ಛೆಯಿಂದ ನಿನ್ನನ್ನು ವರಿಸಲಿಲ್ಲ. ಈಗ ನನ್ನ ಇಚ್ಛೆಯಿಂದ ನಾನು ನಿನ್ನನ್ನು......ಪ್ರೀತಿಯಿಂದ ನೋಡಲಾರೆ......"

ಗಂಭೀರವಾದ ಆ ರಾತ್ರಿಯಲ್ಲಿ ಇಬ್ಬರೂ ಬಹಳ ಹೊತ್ತಿನ ವರೆಗೆ ಹೀಗೆಯೇ ಕುಳಿತುಕೊಂಡಿದ್ದರು. ನಲಿನಿ ಅಳುತ್ತಿರುವಳೆಂದು ಸತ್ಯೇಂದ್ರನಿಗೆ ತಿಳಿಯಿತು. ಸತ್ಯೇಂದ್ರನಿಗೆ ಒಂದೊಂದಾಗಿ ಸರಲೆಯ ನೆನಪುಗಳು ಮುರುಕಳಿಸಿದವು. ಅವಳದೇ ರೂಪ ಆತನ ಎದೆಯಲ್ಲಿ ಅಚ್ಚೊತ್ತಿದ್ದ ಹಾಗೆ ಆತನಿಗೆನಿಸಿತು.

'ಕರೆದೊಯ್ಯಲು ಬಂದಿದ್ದೀರಾ ?'........ಆಕೆಯ ಮಾತು ಆತನಿಗೆ ನೆನಪಾಯಿತು. ಆತನ ಕಣ್ಣಿನಂಚಿನಲ್ಲಿಯೂ ನೀರು ಮಿಡಿಯಿತು.

ಕಣ್ಣೊರಸಿಕೊಂಡು ಸತ್ಯೇಂದ್ರ ನಿಧಾನವಾಗಿ ನಲಿನಿಯ ಎರಡೂ ಕೈಗಳನ್ನು ತನ್ನ ಕೈಗಳಲ್ಲಿ ತೆಗೆದುಕೊಂಡು ಮಿದುವಾಗಿ ಒತ್ತಿದ.

"ಅಳಬೇಡ ನಲಿನಿ, ಇದರಲ್ಲಿ ನನ್ನದೇನು ತಪ್ಪು ? ನನ್ನ ವೇದನೆಯ

ಆಳ ಇನ್ನು ಯಾರೂ ಅರಿತಿಲ್ಲ. ಎದೆಯಲ್ಲಿ ದುಃಖದ ಜ್ವಾಲೆ ಉರಿಯುತ್ತಲೇ ಇದೆ. ಇದು ಕೊಂಚ ಕಡಿಮೆಯಾದರೆ ನಾನು ನಿನ್ನನ್ನು ಪ್ರೀತಿಸಬಲ್ಲೆನೋ ಏನೋ........"

ಈ ವಿಷಾದ ಪೂರ್ಣ ಆದರೆ ಸ್ನೇಹ ತುಂಬಿದ ಮಾತುಗಳ ಬೆಲೆ ಎಷ್ಟು ಜನರಿಗೆ ಗೊತ್ತಿದೆ? ನಲಿನಿಯ ವಯಸ್ಸು ಚಿಕ್ಕದಾದರೂ ಆಕೆ ಸತ್ಯೇಂದ್ರನನ್ನು ಅರಿತುಕೊಂಡಿದ್ದಳು. ಆತನ ವೇದನೆಯನ್ನು ಅರಿತಿದ್ದಳು. ಪತಿ ತನ್ನನ್ನು ಪ್ರೀತಿಸುವದಿಲ್ಲವೆಂದು ಆತನ ಬಾಯಿಂದಲೇ ಆಕೆ ಕೇಳಿದಳು. ಆದರೆ ಸಿಟ್ಟಿಗೇಳಲಿಲ್ಲ. ಹುಚ್ಚು ಹುಡುಗಿ! ಹದಿನಾರನೇ ವಯಸ್ಸಿನಲ್ಲಿ ಸಿಟ್ಟಿಗೇಳದೇ ಮತ್ತೇ ಯಾವಾಗ ಅದು ಕೋಪಿಸಿಕೊಳ್ಳುವದು?

ಅಂದಿನಿಂದ ಪತಿಯ ದುಃಖ ಯಾವರೀತಿಯಿಂದ ಹೋಗಲಾಡಿಸುವದೆಂಬುದೇ ಆಕೆಯ ಚಿಂತೆಯಾಯಿತು. ಆ ದಿನದ ಘಟನೆಯ ನಂತರ ಸತ್ಯೆಂದ್ರ ಪ್ರತಿದಿನವೂ ತನ್ನ ಮತ್ತು ಸರಲೆಯ ಹಿಂದಿನ ಸ್ಮೃತಿಗಳನ್ನು ನೆನಪು ಮಾಡಿಕೊಳ್ಳುತ್ತಿದ್ದ. ಒಂದೇಸವನೆ ಮಾತಾಡುತ್ತಲೇ ಇರುತ್ತಿದ್ದ. ನಲಿನಿ ಏನೂ ಹೇಳುತ್ತಿದ್ದಿಲ್ಲ. ಸುಮ್ಮನೇ ಕೇಳುತ್ತಿದ್ದಳಷ್ಟೆ. ಹೀಗೆ ಅವರು ಕಳೆದ ರಾತ್ರಿಗಳೆಷ್ಟೋ!

# ೫— ಎರಡು ವರ್ಷಗಳ ನಂತರ

**ಈಗ ನಲಿನಿಗೆ ಹದಿನೆಂಟು ವರ್ಷ ಪ್ರಾಯ.** ಈಗ ಆಕೆ ಮೊದಲಿನಂತೆ ಇಲ್ಲ. ಪತಿಯೂ ಸಹ, ಕೊಂಚ ಬದಲಾಯಿಸಿದ್ದಾರೆ. ಪತಿಯ ಪ್ರೀತಿಯನ್ನು ಆಕೆ ತನ್ನೆಡೆ ಸೆಳೆದುಕೊಂಡಿದ್ದಾಳೆ. ಯಾರಿಗೆ ಒಲಿಸಿಕೊಳ್ಳುವದು ಗೊತ್ತಿದೆಯೋ ಅವರಿಗೆ ಅದನ್ನು ಜೋಪಾನವಾಗಿರಿಸುವದೂ ಗೊತ್ತಿದೆ. ಸತ್ಯೇಂದ್ರನಾಥ ಈಗ ಪಬನಾ ಡಿಸ್ಟ್ರಿಕ್ಟಿನ ಮ್ಯಾಜಿಸ್ಟ್ರೇಟನಾಗಿದ್ದಾನೆ. ಈಗೀಗ ಆತನಲ್ಲಿ ತುಂಬ ಪರಿವರ್ತನೆಗಳಾಗಿವೆ. ಆಫೀಸಿನ ಕೆಲಸ ಮುಗಿದಮೇಲೆ ಆತ ಸೀದಾ ಮನೆಯನ್ನೇ ಸೇರುತ್ತಾನೆ. ನಲಿನಿಯ ಜೊತೆ ಹರಟೆ ಹೊಡೆಯುತ್ತಾನೆ, ಚೇಷ್ಟೆ ಮಾಡುತ್ತಾನೆ, ಅಂತೂ ಸುಖದಲ್ಲಿ ದಿನ ಕಳೆಯುತ್ತಿದ್ದಾನೆ. ಅಂದರೆ ಈಗ ಆತ ಒಟ್ಟಿನಮೇಲೆ ಮನುಷ್ಯನಾಗಿದ್ದಾನೆ. ಆದರೂ ಎಂದಾದರೊಮ್ಮೆ ಆತನಲ್ಲಿ ಅಶಾಂತಿಯ ತೆರೆಗಳು ಏಳದಿರುವದಿಲ್ಲ. ಅಂದು ಆತನಿಗೆ ಚಿತ್ತಸ್ವಾಸ್ಥ್ಯವಿರುವದಿಲ್ಲ. ಸರಲೆಯನ್ನು ಮರೆಯುವ ಪ್ರಯತ್ನ ಆತ ಮಾಡುತ್ತಿರುತ್ತಾನೆ– ಆದರೆ ಅವನಿಗೆ ಅದು ಅಶಕ್ಯವಾಗಿದೆ. ಆಫೀಸಿನಿಂದ ಮನೆಗೆ ಬಂದಾಗ ನಲಿನಿ ಕಾಣದಿದ್ದರೆ ಅವನಿಗೆ ಒಮ್ಮೆಲೆ ಸರಲೆಯ ನೆನಪಾಗುತ್ತದೆ.

ಇದು ನಲಿನಿಗೆ ಗೊತ್ತು. ಹೀಗಾಗಿ ಆಕೆ ಇಡೀ ದಿನ ಪತಿಯ ಬಳಿಯಲ್ಲೇ ಇರುತ್ತಾಳೆ. ತಾನು ಬಳಿಯಲ್ಲಿದ್ದಷ್ಟು ಹೊತ್ತು ಆತ ಸರಲೆಯನ್ನು ನೆನಸುವದಿಲ್ಲವೆಂದು ಆಕೆಗೆ ತಿಳಿದಿತ್ತು. ಆ ಸವತಿಯನ್ನು ಮರೆಯದಿದ್ದರೆ ಅಡ್ಡಿಯಿಲ್ಲ. ಆದರೆ ತನ್ನನ್ನು ಅನಾದರಿಸುವದಿಲ್ಲವಲ್ಲ!— ಇಷ್ಟೇ ಆನಂದ ಆಕೆಗೆ.

ಗೋಪಿಕಾಂತರಾಯ ಪಬನಾದಲ್ಲಿಯ ಒಬ್ಬ ಪ್ರತಿಷ್ಠಿತ ವಕೀಲ. ಕಲಕತ್ತೆಯಲ್ಲಿ ನಲಿನಿಯ ನೆರೆಮನೆಯೇ ಅವರದು. ದೂರದ ನೆಂಟರಾದುದರಿಂದ ನಲಿನಿ ಅವರಿಗೆ ಕಕ್ಕ ಎಂದು ಕರೆಯುತ್ತಾಳೆ. ಅವರ ಹೆಂಡತಿಗೆ ಕಕ್ಕಿ ಎಂದು. ಕಕ್ಕಿ ಯಾವಾಗಲೂ ಇವಳ ಮನೆಗೆ ಬರುತ್ತಿರುತ್ತಾಳೆ. ಗೋಪಿಕಾಂತರಾಯರು ಸತ್ಯೇಂದ್ರನ ಗೆಳೆಯ. ಅವರ ಮನೆ ದೂರವಾದರೂ ಸ್ನೇಹದ ಸಂಬಂಧ ಹತ್ತಿರವೇ.

ನಲಿನಿಯೂ ಕಕ್ಕನ ಮನೆಗೆ ಮೇಲಿಂದಮೇಲೆ ಹೋಗುತ್ತ ಇರುತ್ತಾಳೆ. ಕಕ್ಕನ ಮಗಳು ಹೇಮಾ ಈಕೆಯ ಗೆಳತಿ. ಬಾಲ್ಯದಿಂದಲೂ ಅಹುದು.

ಆದಿನ ಹನ್ನೆರಡು ಹೊಡೆದು ಹೋಗಿತ್ತು. ಸತ್ಯೇಂದ್ರ ಆಫೀಸಿಗೆ ಹೋಗಿದ್ದ. ಮನೆಗೆಲಸ ಮುಗಿಸಿ ನಲಿನಿ ಅದೇ ಕಸೂತಿ ಹಾಕಲಿಕ್ಕೆ ಕುಳಿತಿದ್ದಳು, ಅಷ್ಟರಲ್ಲಿ ಅವರ ಮನೆಯ ಮುಂದೆ ಕುದುರೆಗಾಡಿ ನಿಂತ ಸದ್ದಾಯಿತು.

ಹೇಮಾ ಬಂದಿರಬಹುದೇ? ಎಂಬ ವಿಚಾರದಲ್ಲಿದ್ದಾಗಲೇ ಗದ್ದಲ ಮಾಡುತ್ತಲೇ ಹೇಮಾ ಒಳಗೆ ಬಂದಳು.

"ಏಳು, ಸಾಕುಮಾಡು ಅದನ್ನು. ಅಣ್ಣನ ಹೆಂಡತಿ ಬಂದಿದ್ದಾಳೆ. ನಮ್ಮ ಮನೆಗೆ ಹೋಗೋಣ."

"ಓ! ನಿನ್ನ ಅತ್ತಿಗೆ ಬಂದಿದ್ದಾಳೆಯೇ? ಸರಿ. ಇಲ್ಲೇಕೆ ಕರಕೊಂಡು ಬರಲಿಲ್ಲ?" ನಲಿನಿ ಕೇಳಿದಳು.

"ಛೇ! ಅದು ಹೇಗೆ ಸಾಧ್ಯ? ಹೊಸತಾಗಿ ಮದುವೆಯಾಗಿದೆ. ಮೇಲಾಗಿ ನಿನ್ನೆಯೇ ಬಂದಿದ್ದಾಳೆ. ಹುಂ–ಸಾಕೀಗ, ನಡೆ."

ನಲಿನ ಕೊಂಚ ನಕ್ಕು ನುಡಿದಳು.

"ನಾನು ಬರುವದು ಹೇಗೆ ಸಾಧ್ಯವಾದೀತು?"

"ಹೇಗೆ ಬರುವದಿಲ್ಲವೋ ನೋಡುತ್ತೇನೆ. ತುರುಬು ಹಿಡಿದು ದರದರ ಎಳೆದು ಒಯ್ಯುತ್ತೇನೆ ನೋಡು." ಹೇಮಾ ನಗುತ್ತಲೇ ಉತ್ತರವಿತ್ತಳು.

ಹೇಮಾಳ ಸ್ವಭಾವವೇ ಹಾಗೆ–ಅವಳಂದಂತೆಯೇ ಎಲ್ಲವೂ ನಡೆಯಬೇಕು. ಸರಿ, ನಲಿನಿಗೆ ಹೊರಡಲೇ ಬೇಕಾಯಿತು.

ಹೇಮಾಳ ಜೊತೆಯಲ್ಲಿ ಹೋದರೆ ನಲಿನಿಗೆ ಒಂದು ಸಂಕಟ ಕಾದಿತ್ತು. ಅವಳ ಮನೆಗೆ ಹೋದರೆ ಹೊತ್ತಾಗುವದು ಸಹಜವೇ. ಒಂದೆರಡು ಸಲ ಹೀಗಾಗಿದ್ದೂ ಉಂಟು. ಆಗ ನಲಿನಿಯು ಮರಳುವ ಮುಂಚೆ ಸತ್ಯೇಂದ್ರನಾಥ ಆಫೀಸಿನಿಂದ ಬಂದಿರುತ್ತಿದ್ದ. ಆಗ ಸತ್ಯೇಂದ್ರನಿಗೆ ತುಂಬಾ ಸಂಕಟವಾಗುತ್ತದೆ. ಅವನು ಆಗ ಏನಂದುಕೊಂಡರೂ ಸರಿಯೇ, ಆದರೆ ನಲಿನಿಗೆ ತುಂಬ ಪಶ್ಚಾತ್ತಾಪವಾಗುತ್ತದೆ. ಅವಳಿಗೆ ಪತಿಯ ಸ್ವಭಾವ ಗೊತ್ತು.

ಆದರೆ ದುರ್ದೈವದಿಂದ ಇಂದೂ ಹಾಗೆಯೇ ಆಯಿತು. ಎಷ್ಟೇ ಪ್ರಯತ್ನಿಸಿದರೂ ಆಕೆ ಮನೆ ಸೇರುವಾಗ ಏಳು ಹೊಡೆದಿತ್ತು. ಹೊರಗೆ ಜಗುಲಿಯ ಮೇಲೆ ಸತ್ಯೇಂದ್ರ ಪೇಪರು ಓದುತ್ತ ಕುಳಿತಿದ್ದ. ಬಾಗಿಲ ಬಳಿ ಸದ್ದನ್ನು ಕೇಳಿ ಹಿಂತಿರುಗಿ ನೋಡಿದ. ನಲಿನಿ ಒಳಗೆ ಬರುತ್ತಿದ್ದಾಳೆ. ಸತ್ಯೇಂದ್ರ ಒಂದು ರೀತಿಯಾಗಿ ನಕ್ಕ. ನಲಿನಿ ಗಡಿಬಿಡಿಯಿಂದ ಉಪಹಾರದ ವ್ಯವಸ್ಥೆ ಮಾಡಿದಳು. ಸತ್ಯೇಂದ್ರ ಉಪಹಾರದೆಡೆ ತಲೆಯೆತ್ತಿ ನೋಡಲಿಲ್ಲ. ನಲಿನಿ ತುಂಬಾ ಆಗ್ರಹ ಮಾಡಿದಳು. ಆದರೂ ಆತ ಮುಟ್ಟಲಿಲ್ಲ. ಒಂದೇಸವನೇ ಪೇಪರು ಓದುತ್ತಲೇ ಇದ್ದ, ಏನು ಓದುತ್ತಿದ್ದನೋ ಏನೋ!

## ೬—ವಿಧಿಲಿಖಿತ ಯಾರು ಬಲ್ಲರು?

ಇಂದು ಹೇಮಾಂಗಿನಿ ಪತಿಗೃಹಕ್ಕೆ ಹೋಗುವವಳಿದ್ದಾಳೆ. ಅವಳ ಗಂಡ ಉಪೇಂದ್ರಬಾಬು ಕರಕೊಂಡು ಹೋಗಲು ಬಂದಿದ್ದಾನೆ. ನಲಿನಿ ಹೇಮಾಳ ಭೆಟ್ಟಿಯಾಗದೇ ಅನೇಕ ದಿನಗಳು ಕಳೆದಿವೆ. ಹೀಗಾಗಿ ಮನೆಯ ಆಳಿಗೆ ಒಂದು ಚೀಟಿ ಬರೆಕೊಟ್ಟು ಕರಕೊಂಡು ಬರಲು ತಿಳಿಸಿದ್ದಾಳೆ ಹೇಮಾಂಗಿನಿ.

ಅಂದಿನ ಘಟನೆಯ ನಂತರ ಪತಿಯ ಅಪ್ಪಣೆಯ ವಿನಾ ಎಲ್ಲಿಯೂ ಹೋಗಬಾರದೆಂದು ನಲಿನಿ ಪ್ರತಿಜ್ಞೆ ಮಾಡಿದ್ದಳು. ಆದರೆ ಇಂದು ಪ್ರತಿಜ್ಞೆಯನ್ನು ಕಾಯುವದೋ, ಅಥವಾ ಪ್ರೀತಿಯ ಗೆಳತಿಯ ಕೊನೆಯ ಸಲ ಭೇಟಿ ತೆಗೆದುಕೊಳ್ಳುವದೋ ? ಪತಿಯ ಆಜ್ಞೆಯನ್ನೂ ತೆಗೆದು ಹಾಕುವ ಹಾಗಿಲ್ಲ. ಬಹಳ ಹೊತ್ತು ಯೋಚಿಸಿ ಕೊನೆಗೆ ಹೋಗುವದೆಂದು ನಿಶ್ಚಯಿಸಿದಳು. ಅಂದು ಮೂರು ಘಂಟೆಯ ಗಾಡಿಗೆ ಹೇಮಾ ಹೋಗುವವಳಿದ್ದಳು. ಆದರೆ ಗಾಡಿ ತಪ್ಪಿದ್ದರಿಂದ ಉಳಿಯಬೇಕಾಯಿತು. ಆಕೆ ಒತ್ತಾಯದಿಂದ ನಲಿನಿಯನ್ನು ಇರಿಸಿಕೊಂಡಳು. ಬಿಡಲಿಲ್ಲ.

ನಲಿನಿಗೆ ತಾನು ಯಾಕೆ ಮನೆಗೆ ಹೋಗುತ್ತಿದ್ದೇನೆ, ಎಂಬುದರ ಸ್ಪಷ್ಟೀಕರಣ ಕೊಡುವ ಹಾಗಿರಲಿಲ್ಲ. ಹೇಮಾ ತನ್ನನ್ನು ಅಣಕಿಸಿದರೆ? ಕೊನೆಗೆ ಹೇಳಿಯೂ ಬಿಟ್ಟಳು. ಆದರೆ ಹೇಮಾ ನಂಬಲಿಲ್ಲ. ಮೇಲಾಗಿ ನಿರೀಕ್ಷಿಸಿದಂತೆ ನಕ್ಕುಬಿಟ್ಟಳು.

"ನನ್ನನ್ನು ಮೂರ್ಖಳೆಂದು ಎಣಿಸಬೇಡ. ಸಿಟ್ಟುಗಿಟ್ಟು ಎಲ್ಲಾ ಗೊತ್ತಿದೆ ನನಗೆ. ನಮ್ಮವರಿಗೂ ಸಿಟ್ಟು ಮೂಗಿನ ತುದಿಯಲ್ಲಿದೆ." ಎಂದಳು.

ಇದರಿಂದ ನಲಿನಿಗೆ ತುಂಬ ಕಷ್ಟವಾಯಿತು. ಇತ್ತ ಇರಲಿಕ್ಕೂ ಅಲ್ಲ. ಅತ್ತ ಹೋಗಲಿಕ್ಕೂ ಅಲ್ಲ. ಉಭಯ ಸಂಕಟದಲ್ಲಿ ಸಿಕ್ಕು ಬಿದ್ದಳು ನಲಿನಿ. ಎಲ್ಲರೂ ಉಪೇಂದ್ರಬಾಬುವಿನ ಹಾಗೆ ಇರುತ್ತಾರೆಯೆ ?

ನಲಿನಿ ಮನೆಗೆ ಹಿಂದಿರುಗಿದಾಗ ರಾತ್ರಿ ಹತ್ತು ಹೊಡೆದಿತ್ತು. ಮನೆಯ ಕೆಲಸದಾಕೆಯಿಂದ ಸತ್ಯೇಂದ್ರ ಹೊರಗೆ ಮಲಗಿದ್ದಾನೆಂದು ತಿಳಿದುಕೊಂಡಳು.

ಕೆಲಸದವಳು ನಲಿನಿಯನ್ನು ಆಡಿಸಿದವಳು. ಹೀಗಾಗಿ ಕೊಂಚ ಸಿಟ್ಟು ಸಹ ಮಾಡಿದಳು.

ಗಂಭೀರರಾತ್ರಿಯಲ್ಲಿ ಸತ್ಯೇಂದ್ರ ಕಣ್ಣು ಬಿಟ್ಟುಕೊಂಡು ಎವೆಯಿಕ್ಕದೇ ಮಲಗಿದ್ದ. ಆತನ ತಲೆಯಲ್ಲಿ ಪೂರ್ವಸ್ಮೃತಿಗಳು ಒಂದೇ ಸಮನೇ ಸುಳಿದಾಡುತ್ತಿದ್ದವು. ಆತ ಸರಲೆಯನ್ನೂ ನಲಿನಿಯನ್ನೂ ಹೋಲಿಸುತ್ತಿದ್ದ. ಆಕೆಯು ಪ್ರೇಮವೆಲ್ಲಿ, ಈಕೆಯದೆಲ್ಲಿ? ಪ್ರೇಮದ ಗಂಭೀರವಾದ ಆ ಸಾಗರವೆಲ್ಲಿ, ಈ ತುಳುಕುವ ಕೊಡ ಎಲ್ಲಿ........

ಬಾಗಿಲು ತೆರೆದ ಸದ್ದಾಯಿತು. ನಲಿನಿ ಬಂದಿರುವಳೆಂದು ಸತ್ಯೇಂದ್ರ ಅರಿತ. ಆದರೆ ಆತ ಆ ಕಡೆ ನೋಡಲಿಲ್ಲ. ನಲಿನಿ ತನ್ನ ಬದಿಗೆ ನಡೆದು ಬಂದಂತೆ ಸದ್ದಾಯಿತು. ಕಾಲಬುಡದಲ್ಲಿ ಕುಳಿತಂತೆ ಭಾಸವಾಯಿತು. ಆತ ಕಣ್ಣು ಮುಚ್ಚಿಕೊಂಡ. ಬಹಳ ಹೊತ್ತು ಇದೇ ರೀತಿ ಕಳೆಯಿತು. ಸತ್ಯೇಂದ್ರ ಸಿಟ್ಟಿಗೆದ್ದ. ಆತ ಕಣ್ಣು ತೆರೆಯದೇ ಕೊಂಚ ಕಠೋರ ಧ್ವನಿಯಲ್ಲಿ ಹೇಳಿದ.

"ಇದೇನು, ಆಟ ಮಾಡುತ್ತೀಯಾ, ಇಲ್ಲೇಕೆ ಕುಳಿತಿದ್ದಿ ?"

ನಲಿನಿ ಮಾತಾಡಲಿಲ್ಲ. ಮಾತಾಡುವದೂ ಶಕ್ಯವಿರಲಿಲ್ಲ. ಆಕೆ ಅಳುತ್ತಿದ್ದಳು. ಮ್ಯಾಜಿಸ್ಟ್ರೇಟ ಸಾಹೇಬ ಈಗ ಕಣ್ಣು ತೆರೆದ. ಪತ್ನಿ ಅಳುತ್ತಿದ್ದನ್ನು ಕಂಡು ಆತ ಮತ್ತೂ ಕ್ರುದ್ಧನಾದ.

"ಎದ್ದು ಹೋಗಲ್ಲ, ಒಳಗೆ ಹೋಗಿ ಮಲಗು."

ನಲಿನಿ ಕಣ್ಣೊರಸಿಕೊಂಡು ನುಡಿದಳು.

"ನೀವೂ ಒಳಗೆ ನಡೆಯಿರಲ್ಲ ?"

"ಅದು ಸಾಧ್ಯವಿಲ್ಲ. ನನಗೆ ಬಹಳ ನಿದ್ದೆ ಬಂದಿದೆ." ತಿರುಗಿ ಸತ್ಯೇಂದ್ರ ಕಣ್ಣು ಮುಚ್ಚಿದ.

ನಲಿನಿ ಸಾವಕಾಶವಾಗಿ ತನ್ನ ಕೈಯನ್ನು ಆತನ ಕಾಲಮೇಲೆ ಇಟ್ಟಳು.

"ಈ ಸಲ ಕ್ಷಮಿಸಿ ಬಿಡಿ..........ದಯಮಾಡಿ ಒಳಗೆ ನಡೆಯಿರಿ."

ಸತ್ಯೇಂದ್ರ ಸೋಲನ್ನೊಪ್ಪಿಕೊಳ್ಳುವ ಹಾಗಿರಲಿಲ್ಲ.

"ನೀನು ನನಗೆ ಈಗ ಸುಮ್ಮನೇ ಪೀಡಿಸಬೇಡ ತಿಳಿಯಿತೇ? ನೀನು ಈಗ ತಲೆ ಜಪ್ಪಿಸಿಕೊಂಡರೂ ಬರುವದಿಲ್ಲ."

ನಲಿನಿ ಸಾವಕಾಶವಾಗಿ ಎದ್ದು ಹೋದಳು. ಇಡೀ ರಾತ್ರಿಯನ್ನು ಆಕೆ

ಅತ್ತು ಅತ್ತು ಕಳೆದಳು. ಹೇಮಾಂಗಿನಿಯ ಮೇಲೆ ಸಿಟ್ಟುಬಂದಿತು ಆಕೆಗೆ. ಗಂಡಸರ ಮಾತು ಬಹಳ ಗೊತ್ತು ಆಕೆಗೆ! ಈಗ ಸಂಪಡಿಸಲಲ್ಲ ಈ ಜಗಳ !

ಮರುದಿನವೂ ಸತ್ಯೇಂದ್ರ ಒಳಗೆ ಬರಲಿಲ್ಲ. ನಲಿನಿಗೆ ಈಗ ಸಹಿಸಲಾಗಲಿಲ್ಲ. ತನ್ನ ಕೆಲಸದಾಕೆಯ ಹತ್ತಿರ ಒಂದು ಚೀಟಿ ಬರೆದು ಗಂಡನ ಬಳಿ ಕಳುಹಿಸಿದಳು.

ಸತ್ಯೇಂದ್ರ ಅದನ್ನು ಓದದೇ ಚೂರು ಚೂರು ಮಾಡಿ ಎಸೆದುನುಡಿದ, "ಇಂಥಹದೆಲ್ಲ ಇನ್ನುಮುಂದೆ ನಡೆಯುವದಿಲ್ಲ."

ನಾಲ್ಕೈದು ದಿನಗಳ ನಂತರ ನಲಿನಿಯ ಅಣ್ಣ ನರೇಂದ್ರ ತಂಗಿಯ ಊರಿಗೆ ಬಂದ. ಆತನನ್ನು ಕಂಡು ನಲಿನಿಗೆ ತುಂಬ ಆನಂದವಾಯಿತು. ಹಾಗೆಯೇ ವಿಸ್ಮಯವೂ ಕೂಡ.

"ಅಣ್ಣಾ, ಇದೇನು ಹೀಗೆ?"

ನರೇಂದ್ರ ತಂಗಿಯ ನಗೆಯಲ್ಲಿ ಪಾಲುಗಾರನಾಗುತ್ತ ನುಡಿದ.

"ತವರುಮನೆಗೆ ಹೋಗುವ ಬಯಕೆ ನಿನಗೆ ಒಮ್ಮೆಲೆ ಹೇಗೆ ಹುಟ್ಟಿತು?"

"ಬಯಕೆ....?"

ಅವನ ಮಾತಿನರ್ಥ ಆಕೆ ಅಷ್ಟರಲ್ಲಿ ಅರಿತುಕೊಂಡಳು. ಒಣನಗೆ ನಗುತ್ತ ಆಕೆ ಹೇಳಿದಳು.

"ಅಹುದು, ನಿಮ್ಮನ್ನೆಲ್ಲ ನೋಡದೇ ಬಹಳ ದಿನಗಳಾದವಲ್ಲ!"

# ೭—ನಲಿನಿಯ ದುರ್ದೈವ

ನಲಿನಿ ತವರುಮನೆಗೆ ಹೋದ ದಿನ ರಾತ್ರಿ ಸತ್ಯೇಂದ್ರನಿಗೆ ನಿದ್ರೆ ಬರಲಿಲ್ಲ. ಆತ ರಾತ್ರಿಯಿಡೀ ಹೊರಳಾಡುತ್ತಿದ್ದ. ಏನೋ ಅವ್ಯಕ್ತವೇದನೆ! ಏನೋ ನೋವು! ಈಗಲೇ ಎದ್ದು ಕಲಕತ್ತೆಗೆ ಹೋಗಿ ಕರೆದು ತರಲೇ! ಬೇಡ ಎನ್ನುತ್ತಿತ್ತು ಒಂದು ಮನಸ್ಸು. ಅಭಿಮಾನ ತುಂಬ ಕೆಟ್ಟದ್ದು!

ನಲಿನಿಯ ಜೊತೆಗೆ ಆಕೆಯ ಕೆಲಸದವಳೂ ಹೋಗಿದ್ದಳು. ಆಕೆ ಮಾತ್ರ ಈ ವಿರಸದ ಕಾರಣ ಅರಿತಿದ್ದಳು. ಯಾರಿಗೂ ಹೇಳಕೂಡದೆಂದು ನಲಿನಿ ತಾಕೀದು ಮಾಡಿದ್ದಳು. ಹೇಳಿದರೆ ತವರುಮನೆಯಲ್ಲೆಲ್ಲ ಪತಿಯ ಹೆಸರು ಹಾಳಾಗುವದು. ಪತಿ ಒಳ್ಳೆಯವನಿರಲಿ ಅಥವಾ ಕೆಟ್ಟವನಿರಲಿ. ಅವನಿಗೆ ಹೆಸರಿಡುವವರು ಈ ಜನರಾರು ?

ತವರುಮನೆ ಸೇರಿದೊಡನೆಯೇ ನಲಿನಿ ತಾಯಿ ತಂದೆಗಳಿಗೆ ನಮಸ್ಕರಿಸಿದಳು. ಚಿಕ್ಕ ತಮ್ಮನನ್ನು ಮನಸಾ ಮುದ್ದಿಸಿದಳು. ಏನೇನು ಮಾಡಬೇಕಾಗಿತ್ತೋ ಅದೆಲ್ಲವನ್ನೂ ಮಾಡಿದಳು. ಆದರೆ ಆಕೆಯಿಂದ ಹಸನ್ಮುಖಿಯಾಗಿರಲಿಕ್ಕೆ ಸಾಧ್ಯವಿರಲಿಲ್ಲ.

“ ಒಂದೇ ದಿನದ ಪ್ರವಾಸದಿಂದ ನನ್ನ ನಲಿನಿಯ ಮೋರೆ ಎಷ್ಟು ಬಾಡಿ ಹೋಗಿದೆ, ನೋಡಿದಿರಾ, ” ಎಂದಳು ತಾಯಿ ಪತಿಗೆ.

ಆದರೆ ಅಂದು ಬಾಡಿದ ಆ ಮುಖ ಮತ್ತೆಂದಿಗೂ ಪುನಃ ಪ್ರಸನ್ನವಾಗಲಿಲ್ಲ.

ಈ ಪ್ರಪಂಚದಲ್ಲಿ ಚಿಕ್ಕ ಕಾರಣಗಳೇ ಮುಂದೆ ದೊಡ್ಡ ಘಟನೆಗಳ ಮೂಲವಾಗುತ್ತವೆ. ಶೂರ್ಪನಖಿಯ ಒಂದು ಐದು ನಿಮಿಷದ ಚಿತ್ತಚಾಂಚಲ್ಯ ಮುಂದೆ ಇಡೀ ಲಂಕೆಯನ್ನೇ ಸುಡುವಂತೆ ಮಾಡಿತು. ಒಂದು ಸಾದಾ ರೂಪ ಲಾಲಸೆಗಾಗಿ ಇಡೀ ಟ್ರಾಯ್ ನಗರ ಧ್ವಂಸವಾಯಿತು. ಮಹಾನುಭಾವ ಹರಿಶ್ಚಂದ್ರನೂ ಕೂಡ ಇಂಥ ನಿರರ್ಥಕ ಕಾರಣದಿಂದಲೇ ಮುಂದೆ ತುಂಬಾ ಕಷ್ಟನಷ್ಟಗಳನ್ನನುಭವಿಸಿದನು. ಇಲ್ಲಿಯೂ ಕೂಡ ಹೀಗೆ. ಕೊಂಚ ಅಭಿಮಾನದ ಕಾರಣ, ದೊಡ್ಡ ಆಪತ್ತು ನಲಿನಿಯ ಮೇಲೆ ಬಂದೊದಗಿತು. ಇದರಲ್ಲಿ ತಪ್ಪುಯಾರದು ?

ನಲಿನಿಗೆ ಮೊದಲಿನಿಂದಲೂ ಅಭಿಮಾನವೆಂಬುದು ಗೊತ್ತಿದ್ದಿಲ್ಲ. ಆದರೆ ಈಗ ಆಕೆ ಅರಿಯಬೇಕಾಯಿತು. ಇಂಥ ಚಿಕ್ಕ ಕಾರಣಕ್ಕಾಗಿ ಪತಿಯನ್ನು ತ್ಯಾಗಮಾಡಿ ಬರಬೇಕಾಯಿತು ತನಗೆ. ಇದರಿಂದ ತಾನು ಇದ್ದರೇನು, ಸತ್ತರೇನು ?

ಭೀಷಣ ಅಭಿಮಾನದಿಂದ ಆಕೆ ದಿನದಿನವೂ ಸೊರಗುತ್ತ ನಡೆದಳು. ಅಲ್ಲಿ ಸತ್ಯೇಂದ್ರನ ಸ್ಥಿತಿಯೂ ವಿಚಿತ್ರವಾಗಿದೆ. ಈಗ ಆತನ ಅಭಿಮಾನ ಸೊರಗಿದೆ. ನಿರರ್ಥಕ ಜಂಭ ಎಷ್ಟು ದಿನ ತಾಳಬಲ್ಲುದು? ಆದರೂ ಸತ್ಯೇಂದ್ರ ನಲಿನಿಯ ಪತ್ರದ ದಾರಿ ಕಾಯುತ್ತಲೇ ಇದ್ದ.

" ನನ್ನನ್ನು ದಯಮಾಡಿ ಕರಕೊಂಡು ಹೋಗಿರಿ." ಎಂದಿಷ್ಟೇ ಬರೆದರೆ ಸಾಕಿತ್ತಲ್ಲವೇ ?

ದಿನಗಳು ಉರುಳುತ್ತಲೇ ಇದ್ದವು. ಆರು ತಿಂಗಳಾದರೂ ನಲಿನಿಯಿಂದ ಪತ್ರ ಬರಲಿಲ್ಲ. ಸತ್ಯೇಂದ್ರ ದಾರಿ ಕಾದು ಕಾದು ಬೇಸತ್ತ. ಕೊನೆಗೆ ಅವನೂ ಹಠ ಹಿಡಿದ. ಅದರಲ್ಲಿ ಕೊಂಚ ರೋಷವೂ ಬೆರೆತಿತ್ತು. ಗುಣಾವಗುಣ ಗಳನ್ನು ಪರಿಕಿಸದೇ ಸತ್ಯೇಂದ್ರ ತಾನೂ ಹೋಗುವದಿಲ್ಲವೆಂದುಕೊಂಡ. ತಪ್ಪು ಯಾರದೆಂದು ಯೋಚಿಸುವ ಗೋಜಿಗೆ ಆತ ಹೋಗಲೇ ಇಲ್ಲ.

ಯಾರೂ ತಮ್ಮ ದೋಷಗಳನ್ನು ನೋಡಲಿಲ್ಲ. ಎರಡು ಹೃದಯಗಳು ಕೊನೆಯತನಕ ಒಂದೆಡೆ ಸೇರಲಿಲ್ಲ. ಇಬ್ಬರದೂ ತಪ್ಪು ಇದೆ.... ಆದರೆ ಅಪರಾಧ ಮಾತ್ರ ಯಾರದೂ ಇಲ್ಲ ! ಇದಕ್ಕೆ ಭಗವಂತನೇ ಸಾಕ್ಷಿ! ತಪ್ಪು ತೋರಿಸಿಕೊಟ್ಟಾಗ ಆತ್ಮಗ್ಲಾನಿ ಯಾರಿಗೆ ಹೆಚ್ಚಾಗುವದೆಂದು ದೇವರೇ ಬಲ್ಲ !

# ೮—ಸೌಭಾಗ್ಯದ ರಾತ್ರಿ

ಇಂಥ ಗುಣವತಿ ಸೊಸೆ ಮಗನಿಗೆ ಸೇರಲಿಲ್ಲವಲ್ಲ ಎಂದು ತಾಯಿಗೆ ತುಂಬಾ ಕೆಡಕೆನಿಸಿತು. ಆದರೆ ಅದು ಹೇಗೆ ಎಂಬುದನ್ನು ಯಾರೂ ಅರಿಯ ದಾದರು. ತಾಯಿ ನೂರು ಸಲ ಹೇಳಿದಳು. ಆದಷ್ಟು ಪ್ರಯತ್ನಿಸಿದಳು. ಆದರೆ ಮಗನ ಮನಸ್ಸು ತಿರುಗಲಿಲ್ಲ. ಮಗನಿಗೇ ಬೇಡವಾದರೆ ನನಗೇನು ಎಂದು ಕೊಳ್ಳುತ್ತ ಮುದುಕಿ ತಿರುಗಿ ಜಾತಕದ ಯಾದಿಯನ್ನು ಹೊರಗೆ ತೆಗೆದಳು.

ಈ ಮಧ್ಯೆ ಎರಡು ವರ್ಷಗಳ ಹಿಂದೆಯೇ ಹರದೇವ ಬಾಬುಗಳ ದೇಹಾಂತ್ಯವಾಗಿದೆ. ಅವರ ನೆನಪು ಬರದಿರಲಿಲ್ಲ ಸತ್ಯೇಂದ್ರನ ತಾಯಿಗೆ. ಕಣ್ಣೀರು ಉಕ್ಕಿಬಂದಿತು. ಬಳಿಕ ನಲಿನಿಯನ್ನು ನೆನಿಸಿಕೊಂಡಳು. ಆಗಂತೂ ಕಣ್ಣೀರನ್ನು ತಡೆದುಕೊಳ್ಳುವದು ಸಾಧ್ಯವೇ ಇರಲಿಲ್ಲ. ಯಾವ ಸ್ವಭಾವದ ಹುಡುಗಿ ಬರುತ್ತಾಳೆ ಎಂದು ಯಾರಿಗೆ ಗೊತ್ತು ? ಒಂದು ವೇಳೆ ಸತ್ಯೇಂದ್ರನ ತಂದೆ ಇದ್ದಿದ್ದರೆ ಇದೆಲ್ಲ ನಡೆಯುತ್ತಿತ್ತೋ ಇಲ್ಲವೊ?

ಸತ್ಯೇಂದ್ರ ಮದುವೆ ಮಾಡಿಕೊಂಡ! ಗೃಹಪ್ರವೇಶದ ಹೊತ್ತಿಗೆ ಮುದುಕಿಯ ಕಣ್ಣುಗಳು ತಿರುಗಿ ತುಂಬಿ ಬಂದವು.

"ಕಣ್ಣಲ್ಲೇನೋ ಬಿದ್ದಿದೆ. ಆಗಿನಿಂದ ಒಂದೇಸವನೆ ನೀರು ಬರು ತ್ತಿದೆ!" ಎಂದಳಾಕೆ. ಗಿರಿಬಾಲೆ ತುಂಬ ವಾಚಾಳಿ. ಆಕೆ ಈ ಹೊತ್ತಿನಲ್ಲಿ ಸುಮ್ಮನಿರಲಿಲ್ಲ.

"ಈ ವಯಸ್ಸಿನಲ್ಲಿ ಇದು ಮೂರನೇ ಸಲ! ಇನ್ನೆಷ್ಟು ನೋಡುವ ದಿದೆಯೋ ಯಾರು ಬಲ್ಲರು ?"

ಎಲ್ಲರೂ ಇದನ್ನು ಕೇಳಿದರು. ಸತ್ಯೇಂದ್ರನವರೆಗೂ ಈ ಮಾತು ತಲ್ಪಿತು. ನಾಳೆಯೇ ಶೋಭನ ರಾತ್ರಿ!

ಇಂದು ಎಲ್ಲಿಂದಲೋ ಬಹಳ ಸಾಮಾನು ಉಡುಗೊರೆಯಾಗಿ ಬಂದಿದೆ. ವಧೂವರರಿಗಾಗಿ ಅಂಚಿನ ಧೋತರ ಜೋಡಿ, ಬನಾರಸೀ ಸೀರೆ, ಜೊತೆಯಲ್ಲಿ ಮಿಠಾಯಿಯ ಪುಡಿಕೆಗಳು. ಸೀರೆಯನ್ನು ಎಲ್ಲರೂ ಮೆಚ್ಚಿದರು. ಎಲ್ಲಿಂದ ಬಂದದ್ದೆಂದು ವಿಚಾರಣೆ ಪ್ರಾರಂಭವಾಯಿತು.

ಮುದುಕಿಗೆ ವಿವರಿಸಬೇಕಾದರೆ ಸಾಕುಬೇಕಾಯಿತು. ಧ್ವನಿಯನ್ನು

ಸರಿಪಡಿಸಿಕೊಂಡು ಆಕೆ ಹೇಳಿದಳು. " ಸತ್ಯೇಂದ್ರನ ಒಬ್ಬ ಶ್ರೀಮಂತ ಮಿತ್ರನ ಉಡುಗೊರೆ ಇದು. "

ಆಕೆಯೇ ಆ ಮಿಠಾಯಿಗಳನ್ನು ತಂದು ಎಲ್ಲರಿಗೂ ಹಂಚಿದಳು. ಎಲ್ಲರೂ ಮಿಠಾಯಿ ತೆಗೆದುಕೊಂಡು ಮನೆಗೆ ಮರಳಿದರು.

ಹೋಗುವಾಗ ರಾಜಬಾಲೆ ತನ್ನ ಗೆಳತಿ ನೃತ್ಯಕಾಲಿಯನ್ನು ಕುರಿತ ನುಡಿದಳು.

" ನೋಡಿದಿಯಾ, ಎಂಥಹ ಉಡುಗೊರೆ ! "

" ಅಹುದು. ದೊಡ್ಡ ಮನುಷ್ಯರದೆಲ್ಲ ಹಾಗೆಯೇ. ಬಹಳ ಬೆಲೆಯ ಉಡುಗೊರೆಗಳನ್ನೇ ಮಾಡುತ್ತಾರೆ. " ನೃತ್ಯಕಾಲಿ ಉತ್ತರವಿತ್ತಳು.

ಅಷ್ಟರಲ್ಲಿ ಯೋಗಮಾಯೆ ಮಧ್ಯದಲ್ಲಿ ಬಾಯಿ ಹಾಕಿದಳು.

" ಆದರೆ ಮರುಮದುವೆಯನ್ನೇಕೆ ಮಾಡಿಕೊಂಡನಮ್ಮ ಆತ ? ಏನು ಕಡಿಮೆಯಿತ್ತು ಅವನಿಗೆ ? "

ಇದರ ಕಾರಣ ಮಾತ್ರ ಯಾರೂ ಅರಿಯರು.

ರಾಗಮಣಿ ಕಾಯಸ್ಥಳಲ್ಲ. ಕೊಂಚ ಕೆಳಮಟ್ಟದ ಜಾತಿಯವಳು. ನೋಡಲಿಕ್ಕೆ ಅತಿ ಸುಂದರಳಲ್ಲ. ಆದರೆ ಸುಂದರಿಯೆನ್ನಬಹುದು. ಮೂಗು ಕೊಂಚ ಚಪ್ಪಟೆಯಾಗಿದೆ. ಕಣ್ಣುಗಳು ತೀರ ಚಿಕ್ಕವು.

ಅವಳು ನಗುತ್ತಲೇ ತನ್ನ ಗೆಳತಿಯರಿಗೆ ಕಾರಣ ವಿವರಿಸಿದಳು.

" ನಿಮ್ಮ ತಲೆಯಲ್ಲಿ ಕೊಂಚವೂ ಬುದ್ಧಿಯಿಲ್ಲವಲ್ಲ ? ನಲಿನಿ ಯಾವಾಗಲೂ ನಗುತ್ತಲೇ ಮಾತಾಡುತ್ತಿದ್ದಳು ಬೆಡಗು ಬಿನ್ನಾಣಗಿತ್ತಿ ಆಕೆ. ಆಗಲೇ ನನಗೆ ಸಂದೇಹ ಬಂದಿತ್ತು. ಅವಳ ಶೀಲ.... ನಮಗೆಲ್ಲ ಯಾಕೆ ಊರಿನ ಸುದ್ದಿ.... ಆದರೆ ಹೀಗೇ ಹೇಳಿದೆ....ಹುಂ.... ಇಲ್ಲದಿದ್ದರೆ ಬೇರೆ ಮದುವೆ ಮಾಡಿಕೊಳ್ಳುತ್ತಿದ್ದನೇ ಆತ ? "

ಎಲ್ಲರಿಗೂ ಈ ಕಾರಣ ತುಂಬ ಸೇರಿತು. ಊರಿನಲ್ಲೆಲ್ಲ ಇದೇ ಮಾತಾಯಿತು. ಜಮೀಂದಾರರ ಮನೆಯ ಗೂಢ ರಹಸ್ಯ ಬಯಲಾಯಿತು ಎಂದು ಎಲ್ಲರೂ ತಿಳಿದುಕೊಂಡರು !

ಈ ಸುದ್ದಿ ಸತ್ಯೇಂದ್ರನ ತಾಯಿಗೂ ಮುಟ್ಟಿತು. ಆಕೆ ಕಿವಿಯ ಮೇಲೆ ಕೈ ಇಟ್ಟುಕೊಂಡು ರಾಮ ! ರಾಮ ! ಎನ್ನುತ್ತ ಕೋಣೆಯ ಬಾಗಿಲು ಹಾಕಿ

ಕೊಂಡು ಇಡೀ ದಿನ ಒಳಗೆ ಕುಳಿತಳು. ಆಕೆಯ ಸಂಕಟವು ಅತಿಶಯ ವಾಗಿತ್ತು. ತನ್ನ ನಲಿನಿ ಕುಲಟೆ! ಸರಲೆಗಿಂತ ಈಗ ನಲಿನಿಯನ್ನು ಆಕೆ ಹೆಚ್ಚು ಪ್ರೀತಿಸುತ್ತಿದ್ದಳು. ನಲಿನಿಯ ಇಡೀ ಜೀವನವೇ ಹಾಳಾಗಿ ಹೋಗಿತ್ತು. ಕಾಶೀ ಪ್ರಯಾಣಕ್ಕೆ ಹೊರಡುವದೇ ಈಗ ಉಳಿದ ಉಪಾಯವೆಂದು ಮುದುಕಿ ಅರಿತುಕೊಂಡಳು. ಅವಳಿಗೆ ಒಮ್ಮೆಲೆ ಏನು ತೋಚಿತೋ ಏನೋ ಧಡಕ್ಕನೇ ಬಾಗಿಲು ತೆಗೆದು ಒಬ್ಬ ಕೆಲಸದಾಕೆಯನ್ನು ಒಳಗೆ ಕರಕೊಂಡು ಬಾಗಿಲು ಮುಚ್ಚಿಕೊಂಡಳು. ಈ ಕೆಲಸದಾಕೆ ಎಂದರೆ ನಲಿನಿಯ ತವರುಮನೆಯವಳು. ಅವಳ ಜೊತೆಯಲ್ಲಿಯೇ ಗಂಡನ ಮನೆಗೆ ಬಂದವಳು. ಈಗ ಅವಳೇ ಮದುವೆ ಗಾಗಿ ಕಳಿಸಿದ ಉಡುಗೊರೆಗಳನ್ನು ಹೊತ್ತು ತಂದಿದ್ದಳು.

ಮುದುಕಿ ಕ್ರಮಶಃ ನಲಿನಿಯ ಪರಿಸ್ಥಿತಿ ಅರಿತುಕೊಂಡಳು. ನಲಿನಿ ಈಗ ತುಂಬ ಸೊರಗಿದ್ದಾಳೆ. ಕೆಲಸದಾಕೆ ಜಗಳದ ಕಾರಣವನ್ನೂ ಹೇಳದಿರ ಲಿಲ್ಲ. ಕೊನೆಗೆ ನಲಿನಿ ತಿಳಿಸಿದ ನಮಸ್ಕಾರಗಳನ್ನೂ ಹೇಳಿದಳು. ಇದೆಲ್ಲ ಇಬ್ಬರಿಗೂ ಕಣ್ಣೀರಿನ ಕಥೆಯಾಗಿ ಬಿಟ್ಟಿತ್ತು. ಮಗನಿಗೆ ಈ ಬುದ್ಧಿ ಎಲ್ಲಿಂದ ಬಂದಿತು ಎಂದು ತಾಯಿ ಕೊಂಚ ಆಶ್ಚರ್ಯಗೊಂಡಳು. ತನ್ನಮಾತನ್ನು ಸತ್ಯೇಂದ್ರ ಕೇಳಲಿಕ್ಕಿಲ್ಲವೆ? ಏಕೆ ಕೇಳಲಿಕ್ಕಿಲ್ಲ? ಹಾಗಿದ್ದರೆ ನಲಿನಿಯನ್ನು ತಿರುಗಿ ಕರೆತರಬಹುದೆ?

ಅದೇ ದಿನ ಸಂಜೆ ತಾಯಿ ಮಗನ ಭೆಟ್ಟಿಯಾಯಿತು.

" ಮಗೂ, ಒಂದು ಮಾತು ಕೇಳಲಿ? "

" ಅದೇನಮ್ಮ? " ಸತ್ಯೇಂದ್ರ ಮದುವೆಯ ಮಾತಲ್ಲವೆಂದು ಖಚಿತ ಗೊಂಡು ಕೇಳಿದ.

" ನಲಿನಿಯನ್ನು ಕರೆತರುವಿಯಾ ? "

" ಇಲ್ಲ. "

ತಾಯಿಗೆ ತಡೆಯಲಾಗಲಿಲ್ಲ. ಮಗನ ಹೆಗಲಮೇಲೆ ಆತುಕೊಂಡು ಮನಸಾ ಅತ್ತು ಬಿಟ್ಟಳು.

"ನನ್ನ ನಲಿನಿಯ ಬಗ್ಗೆ ಈಗ ಊರಲ್ಲೆಲ್ಲ ಎಷ್ಟು ಗುಜು ಗುಜು ನಡೆ ಯುತ್ತಿದೆ ಬಲ್ಲೆಯಾ ? ಅವಳ ಹೆಸರಿಗೆ ಕಲಂಕ ತಂದಿದ್ದಾರೆ. ನೀನು ಅವಳ ಗಂಡ......ಆಕೆಯ ಗೌರವ ಕಾಯುವದಿಲ್ಲವೆ ?"

"ಕಲಂಕ ?" ಸತ್ಯೇಂದ್ರ ಗಾಬರಿಮಿಶ್ರಿತ ಧ್ವನಿಯಲ್ಲಿ ಕೇಳಿದ.

"ಈ ರೀತಿ ಮೊದಲಿನ ಹೆಂಡತಿಯನ್ನು ತವರುಮನೆಗೆ ಅಟ್ಟಿ ಮದುವೆ ಮಾಡಿಕೊಂಡರೆ ನಾನು ಯಾವ ರೀತಿ ಜನರ ಬಾಯಿ ಒಂದು ಮಾಡಲಿ ? ಹೇಳು."

ಸತ್ಯೇಂದ್ರ ಮಾತಾಡಲಿಲ್ಲ.

"ಹಾಗಾದರೆ ಕರೆತರುವದಿಲ್ಲವೆ ?"

"ಇಲ್ಲ" ಕಡ್ಡಿ ಮುರಿದಂತೆ ನಿಶ್ಚಯದ ಧ್ವನಿಯಲ್ಲಿ ಹೇಳಿದ.

ತಾಯಿ ತುಂಬ ಸಿಟ್ಟಿಗೆದ್ದಳು. ಆಕೆಯ ಹೃದಯವು ಮಗನ ಕೃತ್ಯಕ್ಕಾಗಿ ಹೇಸಿಕೊಂಡಿತು. ಕಠೋರ ಧ್ವನಿಯಲ್ಲಿ ಹೇಳಿದಳು.

"ಹಾಗಾದರೆ ನಾಳೆಯೇ ನನ್ನನ್ನು ಕಾಶಿಗೆ ಕಳುಹಿಸಿ ಕೊಡು. ಒಂದು ಕ್ಷಣ ಈ ಹೊಲಸು ಮನೆಯಲ್ಲಿ ಉಸುರಾಡಿಸುವ ಇಚ್ಛೆ ನನಗಿಲ್ಲ."

ಸತ್ಯೇಂದ್ರ ಈಗ ಮೊದಲಿನ ಸತ್ಯೇಂದ್ರ ಅಲ್ಲ. ಸರಲೆಯ ವಸ್ತುಗಳನ್ನು ನೋಡಿ ಕ್ಷಣಕ್ಷಣಕ್ಕೆ ಅಳುತ್ತಿದ್ದ ಆತ ಈಗ ಹೃದಯವನ್ನು ಕಲ್ಲಾಗಿರಿಸಿಕೊಂಡಿದ್ದಾನೆ. ಒಣಜಂಭದ ಎದುರಿಗೆ ಆತನ ಸದ್ಗುಣಗಳೆಲ್ಲ ಕರಗಿ ಆವಿಯಾಗಿ ಹೋಗಿವೆ. ಅವನು ತಡಮಾಡದೇ, ಯೋಚಿಸದೇ ಒಮ್ಮೆಲೆ ಹೇಳಿದ.

"ನಿನಗೆ ಎಲ್ಲಿ ಹೋಗಬೇಕೋ ಅಲ್ಲಿ ಕಳಿಸಿಕೊಡುವೆ ಆದರೆ ನನಗೆ ಯಾರನ್ನೂ ಕರೆತರುವದು ಶಕ್ಯವಿಲ್ಲ."

ತಾಯಿ ಇದನ್ನು ನಿರೀಕ್ಷಿಸಿರಲಿಲ್ಲ. ಈ ಪೆಟ್ಟಿನಿಂದ ಅವಳಿಗೆ ಚೇತರಿಸಿಕೊಳ್ಳಬೇಕಾದರೆ ಸಾಕುಬೇಕಾಯಿತು. ಅವಳು ಕಣ್ಣೀರು ಸುರಿಸುತ್ತಲೇ ಹೊರಟು ಹೋದಳು.

"ಇದಕ್ಕಾಗಿ ನೀನು ಪಶ್ಚಾತ್ತಾಪ ಪಡುವ ದಿನಗಳು ದೂರವಿಲ್ಲ." ಎಂದು ಹೇಳಿಯೇ ಹೊರಟು ಹೋದಳು. ಸತ್ಯೇಂದ್ರ ಬೇರೆ ದಿಕ್ಕಿಗೆ ಮುಖ ತಿರುವಿದ.

ಮರುದಿನ ಚಿಕ್ಕಪ್ಪನ ಹೆಂಡತಿ ಸತ್ಯೇಂದ್ರನನ್ನು ಕರೆದಳು.

"ಮಗೂ, ನಿನ್ನ ಒಬ್ಬ ಮಿತ್ರ ನಿನಗಾಗಿ ಕಾಣಿಕೆ ಕಳಿಸಿದ್ದಾನೆ. ನೋಡಿದಿಯಾ ?"

"ಇಲ್ಲವಲ್ಲ ?" ಆತನಿಗೆ ಆಶ್ಚರ್ಯವಾಗಿತ್ತು. ಆತನಿಗೆ ಇಂಥ ಮಿತ್ರರು ಯಾರೂ ಇರಲಿಲ್ಲ.

ಚಿಕ್ಕಿ ಒಳಗೆ ಹೋಗಿ ಒಂದು ಹೊರೆಯನ್ನೇ ಹೊತ್ತು ತಂದಳು. ಸತ್ಯೇಂದ್ರ ಬಿಚ್ಚಿ ನೋಡಿದ. ತುಂಬ ಬೆಲೆ ಬಾಳುವ ವಸ್ತ್ರಗಳು ! ಯಾವ ಮಿತ್ರನಿವ ? ತನಗಾಗಿ ಜರಿಯುಅಂಚಿನ ಧೋತರಜೋಡಿ, ವಧುವಿಗೆ ಒಂದು ಭಾರಿ ಬೆಲೆಬಾಳುವ ಬನಾರಸೀ ಪತ್ತಲ !........

ಆತ ಸೀರೆಯನ್ನು ಎತ್ತುತ್ತಿರುವಾಗ ಅದರ ಅಂಚಿನಲ್ಲಿ ಏನೋ ಕಟ್ಟಿದ್ದಂತೆ ತೋರಿತು. ಆತ ಸುತ್ತಲೂ ನೋಡಿ ಯಾರೂ ಇಲ್ಲವೆಂದು ಖಾತ್ರಿ ಮಾಡಿ ಅದನ್ನು ಬಿಚ್ಚಿದ. ಅದರಲ್ಲಿ ಒಂದು ಚೀಟಿ ಇತ್ತು.

"ತಂಗೀ, ಇದು ಸ್ನೇಹದ ಕಾಣಿಕೆ. ತಿರುಗಿ ಕಳಿಸಬೇಡ. ನಿನ್ನ ಅಕ್ಕ ಕಳಿಸಿದ್ದಾಳೆ. ನಿನ್ನ ಜೀವನ ಸುಖಮಯವಾಗಲಿ."

ಹಸ್ತಾಕ್ಷರಗಳನ್ನು ಗುರುತಿಸಿಯೇ ಸತ್ಯೇಂದ್ರ ಬೆವತಿದ್ದ. ಬೆವರು ಧಾರೆ ಧಾರೆಯಾಗಿ ಹರಿಯಿತು. ಜೊತೆಗೆ ಕಣ್ಣೀರೂ ಕೂಡ.

ಅಂದಿನ ಶೋಭನ ರಾತ್ರಿಯ ಹಾಸಿಗೆ ಸತ್ಯೇಂದ್ರನ ಪಾಲಿಗೆ ಮುಳ್ಳಿನ ಹಾಸಿಗೆಯಾಯಿತು.

## ೯—ನರೇಂದ್ರನ ಪತ್ರ

ಪಾಪಿ ಸತ್ತರೆ ಪ್ರಾಯಶ್ಚಿತ್ತ ಪಡೆಯುವವರು ಯಾರು ? ಸತ್ಯೇಂದ್ರನ ವಿರಾಮರಹಿತ ಜೀವನ ಆತನಿಗೆ ಹೊರೆಯಾಗಿ ಬಿಟ್ಟದೆ. ಇಡೀ ದಿನ ಪ್ರಯತ್ನಿಸಿದರೂ ಆತನಿಗೆ ಈ ಹೊರೆ ಇಳಿಸುವದು ಅಶಕ್ಯ.

ಸತ್ಯೇಂದ್ರನ ಮದುವೆಯಾಗಿ ಈಗ ಎರಡು ತಿಂಗಳುಗಳು ಕಳೆದಿವೆ. ಇಂದು ಸತ್ಯೇಂದ್ರನಿಗೆ ಒಂದು ಪತ್ರ ಮತ್ತು ಒಂದು ಪಾರ್ಸಲ್ಲು ಬಂದು ಮುಟ್ಟದೆ.

ಪತ್ರ ನಲಿನಿಯ ಅಣ್ಣನದು ನರೇಂದ್ರನದು.

" ಸತ್ಯೇಂದ್ರಬಾಬು,

ಬರೆಯಲಿಕ್ಕಾಗದೇ ಬರೆಯುತ್ತಿದ್ದೇನೆ. ನಿಮಗೆ ಪತ್ರ ಬರೆಯುವ ಇಚ್ಛೆ ನನಗಿಲ್ಲ. ಆದರೂ ಕರ್ತವ್ಯವನ್ನು ಮಾಡುತ್ತಿದ್ದೇನೆ. ನಲಿನಿಯು ಮರಣದ ಮೊದಲು ಆಕೆ ತುಂಬ ತುಂಬ ಹೇಳಿ ಹೋಗಿದ್ದಾಳೆ. ಈ ಉಂಗುರವನ್ನು ನಿಮಗೆ ಕಳಿಸಿಕೊಡಲು ಆಕೆ ತಿಳಿಸಿದ್ದಳು. ನಿಮ್ಮ ಹೆಂಡತಿಗೆ ಅದನ್ನು ಕೊಡಬೇಕಾಗಿ ಆಕೆಯು ಇಚ್ಛೆಯಿತ್ತು. ಅವಳ ಈ ಕೊನೆಯ ಇಚ್ಛೆಯಾದರೂ ಪೂರ್ತಿಯಾಗುವದೆಂದು ಆಶಿಸುತ್ತೇನೆ. ಈ ಹೊಸ ತಂಗಿಯನ್ನು ಜತನದಿಂದ ನೋಡಿಕೊಳ್ಳಲು ಆಕೆ ನಿಮಗೆ ತಿಳಿಸಿದ್ದಾಳೆ.

—ಇತಿ ನರೇಂದ್ರನಾಥ "

* * * *

ಸತ್ಯೇಂದ್ರನಾಥ ಈಗ ಪಬನಾದಲ್ಲಿ ಇರುವದಿಲ್ಲ. ತಾಯಿಗೆ ಕೂಡ ಕಾಶೀವಾಸ ಸರಿಯಾಗಿ ಲಭಿಸಲಿಲ್ಲ. ಹೊಸ ಹೆಂಡತಿಯು ಹೆಸರು ವಿಧು ಎಂದು—ಪೂರ್ವಜನ್ಮದಲ್ಲಿ ನಲಿನಿಯ ಅಕ್ಕಳಿದ್ದಳೋ ಏನೋ !

## ಸುಲಭ ಸಾಹಿತ್ಯ ಪ್ರಕಾಶನದ

# ಪ್ರಕಟನೆಗಳು

**ಯಾತ್ರಿಕ** ೧-೫೦

ಸುವಿಖ್ಯಾತ ಬಂಗಾಲಿ ಕಾದಂಬರಿಕಾರರಾದ ಪ್ರಬೋಧಕುಮಾರ ಸನ್ಯಾಲರ ಜನಪ್ರಿಯ ಕಾದಂಬರಿ. ರವೀಂದ್ರನಾಥ ಠಾಕೂರ, ಸುಭಾಸಚಂದ್ರ ಭೋಸ, ಶರತ್‌ಚಂದ್ರ ಮುಂತಾದವರಿಂದ ಪ್ರಶಂಸಿಸಲ್ಪಟ್ಟ ಅಪೂರ್ವ ಕೃತಿ. ಕನ್ನಡ ಭಾಷಾಂತರವೂ ಉತ್ತಮವಾಗಿದೆಯೆಂದು ಪರಿಗಣಿಸಲ್ಪಟ್ಟಿದೆ.

**ಮಹಾತ್ಮಾ** ೧-೨೫

ಅಮೇರಿಕ ನಾಲ್ಕು ಸುಪ್ರಸಿದ್ಧ
ಲೇಖಕರ ನಾಲ್ಕು ಶ್ರೇಷ್ಠ ಕಥೆಗಳು.

**ದೆವ್ವದ ಕಥೆಗಳು** ೦-೫೦

ಎರಡು ದಿಗ್ಭ್ರಮೆಗೊಳಿಸುವ ನೀಳ್ಗತೆಗಳು.

ಅನಾಥೆಯ ಬರಹಗಾರರಾದ ಗೋಪಾಲ ಕೃಷ್ಣ
ಅಡಿಗರ ಕೃತಿ

**ಪಾರದ ಹುಡಗ** ೧-೨೫

ನಿರಂಜನರ ಕೃತಿ

## —! ಈ ಪುಸ್ತಕವನ್ನು ಕುರಿತು !—

ಹೆಣ್ಣಿನ ಚಿತ್ರಣದಲ್ಲಿ ಶರಚ್ಚಂದ್ರರದು ಎತ್ತಿದ ಕೈ. ಹಿಂದೂ ಕುಟುಂಬದಲ್ಲಿ ಹೆಣ್ಣಿಗೆ ಅತಿ ಮಹತ್ವದ ಸ್ಥಾನವಿದೆ. ಲಕ್ಷಾಂತರ ರೂಪಾಯಿ ನಗದಾಗಿ ಇದ್ದು ರಾಣಿಯಂತೆ ಮೆರೆಯುವದು ಸಾಧ್ಯವಿದ್ದರೂ ಮಕ್ಕಳಿಂದ ವಂಚಿತಳಾಗಿ ಬದುಕುವದು ಹಿಂದೂ ನಾರಿಗೆ ದುರ್ಧರವಾಗುತ್ತದೆ.

ಪಾತ್ರಗಳ ಚಿತ್ರಣ, ಹೃದಯಂಗಮವಾದ ಸನ್ನಿವೇಶ, ಕಥಾ ನಿರೂಪಣೆಯಲ್ಲಿಯ ಚಮತ್ಕಾರಗಳನ್ನು ನೋಡುವಾಗ ಶರಚ್ಚಂದ್ರರ ಅಸಾಮಾನ್ಯ ಸಾಮರ್ಥ್ಯದ ಅರಿವಾಗುವದು.

P. Y. Burde.

